KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೬, ೨೦೧೦ (ಭಾದ್ರಪದ ೨೫ ಶಕ ವರ್ಷ ೧೯೩೨) | ಸಂಚಿಕೆ ೩೭ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ–70/2010, ದಿನಾಂಕ:11ನೇ ಆಗಸ್ಟ್, 2010**

**ಅರ್ಜಿದಾರರು**

1) ಶ್ರೀಮತಿ ನಸರೀನ ಗಂಡ ಮೊಹಮ್ಮದ್ ಇಕ್ಬಾಲ್, 40 ವರ್ಷ,

2) ಶ್ರೀಮತಿ ವಹಿದಾ ಉಮ್ಮಿಸಾ ಗಂಡ ಅಬ್ದುಲ್ ಗನಿ, 65 ವರ್ಷ,

3) ಮೊಹಮ್ಮದ್ ಕರೀಮ್ ತಂದೆ ಮೊಹಮ್ಮದ್ ಇಕ್ಬಾಲ್

4) ಆಸ್ಮಾ ಬೇಗಂ ತಂದೆ ಮೊಹಮ್ಮದ್ ಇಕ್ಬಾಲ್

ಸಾ:ಅಂಬಲ್ಗಾ, ತಾ:ಆಳಂದ, ಜಿ:ಗುಲ್ಬರ್ಗಾ.

**ಪ್ರತಿವಾದಿಗಳು**

1) ಶ್ರೀ ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಕ್ಲಾಸ್–01 ಕಾಂಟ್ರ್ಯಾಕ್ಟರ್, ಸಾ:ಹೌಸ್, ನಂ.8/2/293/2/ಎ71 ರೋಡ್, 9ನೇ ಜುಬಲಿ ಹಿಲ್ಸ್ ರಸ್ತೆ, ಹೈದ್ರಾಬಾದ್.

2) ಎಕ್ಸಿಕ್ಯೂಟಿವ್ ಇಂಜಿನಿಯರ್, ಲೋಕೋಪಯೋಗಿ (ಪಿಡಬ್ಲ್ಯೂಡಿ) ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಕೊಪ್ಪಳ ಜಿಲ್ಲೆ, ಕೊಪ್ಪಳ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮೊಹಮ್ಮದ್ ಇಕ್ಬಾಲ್ ಪಟೇಲ್, ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಮೊಹಮ್ಮದ್ ಇಕ್ಬಾಲ್ ಪಟೇಲ್, ಇವರ ವಾರಸುದಾರರಾದ (1) ಶ್ರೀಮತಿ ನಸರೀನ ಗಂಡ ಮೊಹಮ್ಮದ್ ಇಕ್ಬಾಲ್, (2) ಶ್ರೀಮತಿ ವಹಿದಾ ಉಮ್ಮಿಸಾ ಗಂಡ ಅಬ್ದುಲ್ ಗನಿ, (3) ಮೊಹಮ್ಮದ್ ಕರೀಮ್ ತಂದೆ ಮೊಹಮ್ಮದ್ ಇಕ್ಬಾಲ್ ಹಾಗೂ ಆಸ್ಮಾಬೇಗಂ ತಂದೆ ಮೊಹಮ್ಮದ್ ಇಕ್ಬಾಲ್, ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ

ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್.1265 ಕೊಪ್ಪಳ ಜಿಲ್ಲೆ, ಕೊಪ್ಪಳ.

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯ ನಡವಳಿಗಳು**

**ವಿಷಯ:** 2010–11ರ ಸಾಲಿನಲ್ಲಿ "ಗ್ರೂಪ್–ಬಿ" ವರ್ಗದ ಸಹಾಯಕ ಸರ್ಕಾರಿ ಅಭಿಯೋಜಕರುಗಳ ವರ್ಗಾವಣೆಯ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರ ಸಂಖ್ಯೆ: ಒಇ 101 ಪಿಪಿಇ 2010, ದಿನಾಂಕ:21.08.2010.

**ಆದೇಶ ಸಂಖ್ಯೆ: ಡಿಪಿಎನ್:ಸಿಶಾ–1ಎ:14:2010–11, ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2010**

ಸರ್ಕಾರದ ಉಲ್ಲೇಖಿತ ಪತ್ರದ ಸೂಚನೆಗಳನ್ವಯ, ಶ್ರೀಮತಿ ಕೆ.ಜಿ. ಅಶ್ವಿನಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಡಿಕೇರಿ, ಅವರನ್ನು ಕೋರಿಕೆಯ ಮೇರೆಗೆ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಕಲೇಶಪುರ ಹುದ್ದೆಗೆ ವರ್ಗಾವಣೆ ಮಾಡಲಾಗಿದೆ.

ವರ್ಗಾವಣೆಯು ಅಧಿಕಾರಿಗಳ ಕೋರಿಕೆಯ ಮೇರೆಗೆ ಆಗಿರುವುದರಿಂದ, ಅವರು ಯಾವುದೇ ರೀತಿಯ ಭತ್ಯೆ ಹಾಗೂ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

**ಹೆಚ್.ಆರ್. ರೇಣುಕ**
ಪಿ.ಆರ್.1345 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ
ನಿರ್ದೇಶಕರು, ಬೆಂಗಳೂರು.

**ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ**

**ಕರ್ನಾಟಕ ಸರ್ಕಾರ**

**ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಘ, ಬೆಂಗಳೂರು**

**(ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಅಂಗ ಸಂಸ್ಥೆ)**

**ಅಧಿಸೂಚನೆ**

**ಎನ್.ಆರ್.ಹೆಚ್.ಎಂ/ಎಸ್.ಪಿ.ಎಂ.ಯು/ಆರ್‌ಟಿಐ/03/2010, ದಿನಾಂಕ:23ನೇ ಆಗಸ್ಟ್, 2010**

**ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದ ರೂಪರೇಷೆಗಳ ವಿವರಗಳನ್ನು ಮಾಹಿತಿ ಹಕ್ಕು ಅಧಿನಿಯಮ 2005 ರ ಪ್ರಕರಣ 4 (1) (ಬಿ) ಯ ಪ್ರಕಾರ ಈ ಕೆಳಕಂಡಂತೆ ಪ್ರಕಟಿಸಲಾಗುತ್ತಿದೆ.**

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನವು 2005ರ ಏಪ್ರಿಲ್ ತಿಂಗಳಿನಲ್ಲಿ ಕೇಂದ್ರ ಸರ್ಕಾರ ಪ್ರಾಯೋಜಿತ ಕಾರ್ಯಕ್ರಮವಾಗಿ ಆರಂಭಗೊಂಡಿದ್ದು ಅದರ ಗುರಿಯು ಪ್ರಮುಖವಾಗಿ, ತಾಯಿಮರಣ ದರ ಮತ್ತು ಶಿಶುಮರಣ ದರವನ್ನು ಕಡಿಮೆ ಮಾಡುವುದಾಗಿದೆ. ಇದಕ್ಕೆ ಪೂರಕವಾಗಿ ತಾಯಿ ಭಾಗ್ಯ ಕಾರ್ಯಕ್ರಮವು ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳಿಗೆ ಅನುಕೂಲವಾಗುವಂತೆ ರೂಪಿಸಲಾಗಿದೆ. ಪ್ರಸೂತಿ ಆರೈಕೆ, ಮಡಿಲು ಮುಂತಾದ ಕಾರ್ಯಕ್ರಮಗಳು ಶಿಶುಮರಣ ದರ ಮತ್ತು ತಾಯಿಮರಣ ದರವನ್ನು ಕಡಿಮೆ ಮಾಡುವ ಗುರಿ ಸಾಧನೆಯಲ್ಲಿ ಪ್ರಮುಖ ಪಾತ್ರವಹಿಸಿದೆ. ಜನನಿ ಸುರಕ್ಷಾ ಯೋಜನೆಯು ಈ ವಿಷಯದಲ್ಲಿ ಮತ್ತೊಂದು ಕಾರ್ಯಕ್ರಮವಾಗಿದೆ. ಹೆರಿಗೆಗಳನ್ನು ಸಾಂಸ್ಥಿಕರಣಗೊಳಿಸಲು ರಾಜ್ಯಾದ್ಯಾಂತ 1200, 24X7 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ನಡೆಸುವ ಗುರಿಯನ್ನು ಹೊಂದಿದ್ದು ಪ್ರಸ್ತುತ 988, 24X7 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದೆ. ಅಲ್ಲದೆ ಜನಸಾಮಾನ್ಯರಿಗೆ ಉತ್ತಮ ಆರೋಗ್ಯವನ್ನು ಒದಗಿಸುವ ಹಿನ್ನೆಲೆಯಲ್ಲಿ ತಾಲ್ಲೂಕು ಮಟ್ಟದಲ್ಲಿ ಹಾಗೂ ಪಟ್ಟಣ ಮಟ್ಟದಲ್ಲಿ 192 ಫಸ್ಟ್ ರೆಫರೆಲ್ ಯೂನಿಟ್‌ಗಳನ್ನು ಪ್ರಾರಂಭಿಸುವ ಗುರಿಯನ್ನು ಹೊಂದಿದ್ದು ಅವುಗಳಲ್ಲಿ 148 ರೆಫರೆಲ್ ಯೂನಿಟ್‌ಗಳು ಈಗಾಗಲೇ ಕಾರ್ಯನಿರ್ವಹಿಸುತ್ತಿವೆ. ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನವು ರಾಜ್ಯದ ಎಲ್ಲಾ ಜನತೆಗೂ ಆರೋಗ್ಯ ನೀಡುವ ದಿಶೆಯಲ್ಲಿ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಪೂರಕವಾಗಿ ಕೆಲಸ ನಿರ್ವಹಿಸುತ್ತಿದೆ. ಮೇಲೆ ವಿವರಿಸಿದ ಕಾರ್ಯಕ್ರಮ ಸಾಧನೆಗೆ ಅಭಿಯಾನವು ಈ ಕೆಳಕಂಡ ರೂಪರೇಶೆಗಳನ್ನು ಹೊಂದಿ ರಚಿತವಾಗಿದೆ.

**I. ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೊಸೈಟಿ**

ಅಭಿಯಾನದ ಕಾರ್ಯಚಟುವಟಿಕೆಗಳು ಅದಕ್ಕಾಗಿ ಸ್ಥಾಪಿತಗೊಂಡಿರುವ ನೊಂದಾಯಿತ ರಾಜ್ಯ ಆರೋಗ್ಯ ಸೊಸೈಟಿಯ ಮೂಲಕ ನಡೆಯುತ್ತದೆ. ರಾಜ್ಯ ಆರೋಗ್ಯ ಸೊಸೈಟಿಯ ರಚನೆಯ ವಿವರ ಈ ಕೆಳಕಂಡಂತಿದೆ.

**ಅ) ಆಡಳಿತ ಮಂಡಳಿ:**

ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೊಸೈಟಿಯ ಆಡಳಿತ ಮಂಡಳಿಯ ಸದಸ್ಯರುಗಳ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಅಧಿಕಾರಿ ಸದಸ್ಯರು | ಆಡಳಿತ ಮಂಡಳಿಯಲ್ಲಿ ಸ್ಥಾನಮಾನ |
|---|---|---|
| 1 | ಅಭಿವೃದ್ಧಿ ಆಯುಕ್ತರು ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿ ಆರೋಗ್ಯ ಮತು ಕುಟುಂಬ ಕಲ್ಯಾಣ ಇಲಾಖೆ | ಉಪಾಧ್ಯಕ್ಷರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ ಆರ್ಥಿಕ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿ,ವೈದ್ಯಕೀಯ ಶಿಕ್ಷಣ | ಸದಸ್ಯರು |
| 8 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 9 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು/ಮಿಷಿನ್ ಡೈರೆಕ್ಟರ್ | ಸದಸ್ಯರು |
| 10 | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| 11 | ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ, ಮತ್ತು ಹೋಮಿಯೋಪತಿ | ಸದಸ್ಯರು |
| 12 | ನಿರ್ದೇಶಕರು,ವೈದ್ಯಕೀಯ ಶಿಕ್ಷಣ | ಸದಸ್ಯರು |
| 13 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ. | ಸದಸ್ಯ ಕಾರ್ಯದರ್ಶಿ |

**ಆ) ಕಾರ್ಯಕಾರಿ ಸಮಿತಿ:**

ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೊಸೈಟಿಯ ಕಾರ್ಯಕಾರಿ ಸಮಿತಿಯ ಸದಸ್ಯರುಗಳ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಅಧಿಕಾರಿ ಸದಸ್ಯರು | ಕಾರ್ಯಕಾರಿ ಸಮಿತಿಯಲ್ಲಿ ಸ್ಥಾನಮಾನ |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತು ಕುಟುಂಬ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು/ಮಿಷಿನ್ ಡೈರೆಕ್ಟರ್ | ಸಹ-ಅಧ್ಯಕ್ಷರು |
| 3 | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| 4 | ಯೋಜನಾ ನಿರ್ದೇಶಕರು(ಆರ್ ಸಿ ಹೆಚ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ. | ಸದಸ್ಯ ಕಾರ್ಯದರ್ಶಿ |
| 5 | ಯೋಜನಾ ನಿರ್ದೇಶಕರು (ಐಡಿಎಸ್‌ಪಿ) | ಸದಸ್ಯರು |

| ಕ್ರಮ ಸಂಖ್ಯೆ | ಅಧಿಕಾರಿ ಸದಸ್ಯರು | ಕಾರ್ಯಕಾರಿ ಸಮಿತಿಯಲ್ಲಿ ಸ್ಥಾನಮಾನ |
|---|---|---|
| 6 | ಜಂಟಿ ನಿರ್ದೇಶಕರು, ಕುಷ್ಠ | ಸದಸ್ಯರು |
| 7 | ಜಂಟಿ ನಿರ್ದೇಶಕರು, ಟಿ.ಬಿ. | ಸದಸ್ಯರು |
| 8 | ಜಂಟಿ ನಿರ್ದೇಶಕರು, ನೇತ್ರ | ಸದಸ್ಯರು |
| 9 | ಭಾರತ ಸರ್ಕಾರದ ಪ್ರಾದೇಶಿಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು | ಸದಸ್ಯರು |

ಕಾರ್ಯಕಾರಿ ಸಮಿತಿಯು ತನ್ನ ಕಾರ್ಯ ಚಟುವಟಿಕೆಗಳಿಗೆ ಅನುಕೂಲವಾಗುವಂತೆ ಸೂಕ್ತ ವ್ಯಕ್ತಿಯನ್ನು ಹೆಚ್ಚುವರಿ ಸದಸ್ಯರನ್ನಾಗಿ ಸೇರಿಸಿ ಕೊಳ್ಳುವ ಅವಕಾಶವಿದೆ.

ಆಡಳಿತ ಮಂಡಳಿಯ ಸಭೆಯು ಕನಿಷ್ಠ ವರ್ಷದಲ್ಲಿ ಆರು ತಿಂಗಳಿಗೊಮ್ಮೆ ಮತ್ತು ಕಾರ್ಯಕಾರಿ ಸಮಿತಿಯ ಸಭೆಯು ಪ್ರತಿ ತಿಂಗಳು ನಡೆಯಬೇಕಾಗಿರುತ್ತದೆ.

ಕಾರ್ಯಕಾರಿ ಸಮಿತಿಯು ಅಭಿಯಾನದ ಕಾರ್ಯ ಚಟುವಟಿಕೆ ಸಂಬಂಧದ ಎಲ್ಲಾ ತೀರ್ಮಾನಗಳನ್ನು ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿದೆ.

**II. ರಾಜ್ಯ ಆರೋಗ್ಯ ಸೊಸೈಟಿಯ ಸಚಿವಾಲಯ (Secretariat) ವಿವರಗಳು ಈ ಕೆಳಕಂಡಂತಿದೆ.**

1. ಸೊಸೈಟಿಯ ಅಧ್ಯಕ್ಷರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯದರ್ಶಿಗಳು
2. ಸೊಸೈಟಿಯ ಸಹ ಅಧ್ಯಕ್ಷರು ಅಭಿಯಾನ ನಿರ್ದೇಶಕರು
3. ಸೊಸೈಟಿಯ ಸದಸ್ಯ ಕಾರ್ಯದರ್ಶಿಗಳು ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್)
4. ಅಭಿಯಾನದ ಮುಖ್ಯ ಆಡಳಿತಾಧಿಕಾರಿಗಳು
5. ಅಭಿಯಾನದ ಮುಖ್ಯ ಲೆಕ್ಕಪತ್ರಾಧಿಕಾರಿಗಳು
6. ಅಭಿಯಾನದ ಉಪ ಮುಖ್ಯ ಲೆಕ್ಕಪತ್ರಾಧಿಕಾರಿಗಳು
7. ಅಭಿಯಾನ ಕಾರ್ಯಕ್ರಮ ಅನುಷ್ಠಾನ ಶಾಖೆ
8. ಅಭಿಯಾನ ಲೆಕ್ಕ ಪತ್ರ ಶಾಖೆ
9. ವಿವಿಧ ಕಾರ್ಯಕ್ರಮ ಸಲಹೆಗಾರರುಗಳು
10. ಶಾಖಾ ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರುಗಳು, ದ್ವಿತೀಯ ದರ್ಜೆ ಸಹಾಯಕರುಗಳು ಮತ್ತು ಗಣಕಯಂತ್ರ ಸಹಾಯಕರು, ಗ್ರೂಪ್ ಡಿ ನೌಕರರು, ವಾಹನ ಚಾಲಕರು.

ಮೇಲ್ಕಂಡ ಸಿಬ್ಬಂದಿಯಲ್ಲಿ ಕಾರ್ಯಕ್ರಮ ಸಲಹೆಗಾರರು, ಗಣಕಯಂತ್ರ ಸಹಾಯಕರು, ಮತ್ತು ಶಾಖಾ ಸಹಾಯಕರು ಇತ್ಯಾದಿ ಮಾನವ ಸಂಪನ್ಮೂಲವನ್ನು ಸೊಸೈಟಿಯು ಒಪ್ಪಂದದ ಆಧಾರದ ಮೇಲೆ ಹಾಗೂ ಔಟ್ ಸೋರ್ಸಿಂಗ್ ಏಜೆನ್ಸಿಗಳ ಮೂಲಕ ಅಗತ್ಯತೆಗೆ ತಕ್ಕಂತೆ ನೇಮಕ ಮಾಡಿಕೊಂಡಿದೆ.

ಭಾರತ ಸರ್ಕಾರವು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನವನ್ನು ಒಂದು ನಿಶ್ಚಿತ ಅವಧಿಯ ಒಳಗೆ ಗುರಿ ಸಾಧನೆ ಮಾಡುವ ಅಭಿಲಾಷೆಯಿಂದ ಪ್ರಾರಂಭಿಸಿದೆ. ಗುರಿ ಸಾಧನೆಯವರೆಗೆ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಅದರ ವಿವಿಧ ಕಾರ್ಯಕ್ರಮಗಳಿಗೆ ಪೂರಕವಾಗಿ ಅಭಿಯಾನವು ಕೆಲಸ ನಿರ್ವಹಿಸುತ್ತದೆ.

**III. ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದ ಪ್ರಮುಖ ಕಾರ್ಯಕ್ರಮಗಳು ಕಾರ್ಯಕ್ರಮ ಮಾಹಿತಿ ಅಧಿಕಾರಿಗಳು ಅಪೀಲು ಪ್ರಾಧಿಕಾರ ವಿವರಗಳು.**

| ಕ್ರಮ ಸಂಖ್ಯೆ | ಪ್ರಮುಖ ಕಾರ್ಯಕ್ರಮಗಳು | ಕಾರ್ಯಕ್ರಮ ಮಾಹಿತಿ ಅಧಿಕಾರಿಗಳು | ದೂರವಾಣಿ ಸಂಖ್ಯೆ | ಅಪೀಲು ಪ್ರಾಧಿಕಾರ |
|---|---|---|---|---|
| 1. | ತಾಯಿ ಆರೋಗ್ಯ | ಡಾ॥ ಅಮೃತೇಶ್ವರಿ<br>ಉಪ ನಿರ್ದೇಶಕರು (ತಾಯಿಆರೋಗ್ಯ) | 22874929 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) |

| ಕ್ರಮ ಸಂಖ್ಯೆ | ಪ್ರಮುಖ ಕಾರ್ಯಕ್ರಮಗಳು | ಕಾರ್ಯಕ್ರಮ ಮಾಹಿತಿ ಅಧಿಕಾರಿಗಳು | ದೂರವಾಣಿ ಸಂಖ್ಯೆ | ಅಪೀಲು ಪ್ರಾಧಿಕಾರ |
|---|---|---|---|---|
| 2. | ಮಡಿಲು ಕಾರ್ಯಕ್ರಮ | ಡಾ॥ ಅಮೃತೇಶ್ವರಿ ಉಪ ನಿರ್ದೇಶಕರು (ಐ.ಯು.ಡಿ) | 22874929 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) |
| 3. | ಶಿಶು ಆರೋಗ್ಯ | ಡಾ॥ ಲಕ್ಷ್ಮೀ ನಾರಾಯಣ್ ಉಪ ನಿರ್ದೇಶಕರು (ಶಿಶು ಆರೋಗ್ಯ) | | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) |
| 4. | ಆಶಾ ಕಾರ್ಯಕ್ರಮ – ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ | ಡಾ॥ ರಮೇಶ್ ಬಾಬು ರಿಸರ್ಚ್ ಆಫೀಸರ್ (ಆರ್.ಸಿ.ಹೆಚ್) | | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) |
| 5. | ಗರ್ಭ ಪೂರ್ವ ಮತ್ತು ಪ್ರಸವ ಪೂರ್ವ ತಪಾಸಣೆ (ಪಿ.ಸಿ.ಪಿ.ಎನ್.ಡಿ.ಟಿ) | ಡಾ॥ ಸಿದ್ದೇಶ್ ಉಪ ನಿರ್ದೇಶಕರು (ಪಿ.ಸಿ.ಪಿ.ಎನ್.ಡಿ.ಟಿ) | 22341996 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) |
| 6. | ಅಭಿಯಾನದ ಆಡಳಿತಾತ್ಮಕ ವಿಷಯಗಳು | ಶ್ರೀ. ಕೆ.ಎನ್. ರಮೇಶ್ ಮುಖ್ಯ ಆಡಳಿತಾಧಿಕಾರಿಗಳು | 22341985 | ಅಭಿಯಾನ ನಿರ್ದೇಶಕರು |
| 7. | ಅಭಿಯಾನದ ಹಣಕಾಸು ವ್ಯವಹರಣೆ | ಶ್ರೀ. ಜೆ. ಮಂಜುನಾಥ್ ಮುಖ್ಯ ಹಣಕಾಸು ಅಧಿಕಾರಿಗಳು | 22342023 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) |

ಅಭಿಯಾನದ ಕಾರ್ಯಕ್ರಮಗಳು ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮೂಲಕ ಅನುಷ್ಠಾನಗೊಳ್ಳುತ್ತದಾದ್ದರಿಂದ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಎಲ್ಲಾ ಅಧಿಕಾರಿಗಳು ಮತ್ತು ನೌಕರರು ಅಭಿಯಾನದ ಕಾರ್ಯಕ್ರಮದ ಅನುಷ್ಠಾನಕ್ಕೆ ಜವಾಬ್ದಾರರಾಗಿರುತ್ತಾರೆ. ಆದ ಕಾರಣ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಈ ಕೆಳಕಂಡ ಅಧಿಕಾರಿಗಳು ಅಭಿಯಾನ ಕಾರ್ಯಕ್ರಮ ಅನುಷ್ಠಾನ ಅಧಿಕಾರಿಗಳಾಗಿರುತ್ತಾರೆ ಹಾಗೂ ಕಾರ್ಯಕ್ರಮ ಮಾಹಿತಿ ಅಧಿಕಾರಿಗಳಾಗಿರುತ್ತಾರೆ.

**IV. ಮಾಹಿತಿ ಹಕ್ಕು ಅಧಿನಿಯಮ 2005ರ ಪ್ರಕರಣ 5(1), 5(2) ಮತ್ತು 19(1) ಪ್ರಕಾರ ಮಾಹಿತಿ ಅಧಿಕಾರಿಗಳ ವಿವರ ಈ ಕೆಳಕಂಡಂತಿದೆ.**

| ಕ್ರಮ ಸಂಖ್ಯೆ | ವಿಷಯಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1)ರಡಿ | ದೂರವಾಣಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ದೂರವಾಣಿ | ಅಪೀಲು ಪ್ರಾಧಿಕಾರ ಸೆಕ್ಷನ್ 19(1) ರಡಿ | ದೂರವಾಣಿ |
|---|---|---|---|---|---|---|---|
| 1 | ಪ್ರಾಥಮಿಕ ಆರೋಗ್ಯ ಕೇಂದ್ರಗಳ ಕಾರ್ಯಕ್ರಮಗಳ ಬಗ್ಗೆ. | ಜಂಟಿ ನಿರ್ದೇಶಕರು (ಆರೋಗ್ಯ ಮತ್ತು ಯೋಜನೆ) | 22875875 | ಉಪ ನಿರ್ದೇಶಕರು (ಆರೋಗ್ಯ ಮತ್ತು ಯೋಜನೆ) | 22875875 | ಅಪರ ನಿರ್ದೇಶಕರು, (ಸಾರ್ವಜನಿಕ ಆರೋಗ್ಯ) | 22261650 Extn: 217 |

| ಕ್ರಮ ಸಂಖ್ಯೆ | ವಿಷಯಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷೆನ್ 5(1)ರಡಿ | ದೂರವಾಣಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷೆನ್ 5(2) | ದೂರವಾಣಿ | ಅಪೀಲು ಪ್ರಾಧಿಕಾರ ಸೆಕ್ಷೆನ್ 19(1) ರಡಿ | ದೂರವಾಣಿ |
|---|---|---|---|---|---|---|---|
| 2 | ಸಾಂಕ್ರಾಮಿಕ ಆರೋಗ್ಯ ನಿಯಂತ್ರಣ ಕಾರ್ಯಕ್ರಮಗಳ ಬಗ್ಗೆ. | ಜಂಟಿ ನಿರ್ದೇಶಕರು (ಸಿಎಂಡಿ) | 22871950 | ಉಪ ನಿರ್ದೇಶಕರು (ಸಿಎಂಡಿ) | 22873151 | ಯೋಜನಾ ನಿರ್ದೇಶಕರು (ಐ.ಡಿ.ಎಸ್.) | 22874929 |
| 3 | ಆರೋಗ್ಯ ಮತ್ತು ಯೋಜನೆ ಕಾರ್ಯಕ್ರಮಗಳ ಬಗ್ಗೆ. | ಜಂಟಿ ನಿರ್ದೇಶಕರು (ಆರೋಗ್ಯ ಮತ್ತು ಯೋಜನೆ) | 22875875 | ಉಪ ನಿರ್ದೇಶಕರು (ಆರೋಗ್ಯ ಮತ್ತು ಯೋಜನೆ) | 22875875 | ಅಪರ ನಿರ್ದೇಶಕರು, (ಸಾರ್ವಜನಿಕ ಆರೋಗ್ಯ) | 22261650 Extn: 217 |
| 4 | ಮಲೇರಿಯಾ ಮತ್ತು ಫೈಲೇರಿಯಾ ನಿಯಂತ್ರಣ ಕಾರ್ಯಕ್ರಮಗಳ ಬಗ್ಗೆ. | ಜಂಟಿ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ) | 22871472 Extn: 219 | ಉಪ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ) | 22873151 Extn: 253 | ಯೋಜನಾ ನಿರ್ದೇಶಕರು (ಐ.ಡಿ.ಎಸ್.) | 22874929 |
| 5 | ವೈದ್ಯಕೀಯಕ್ಕೆ ಸಂಬಂಧಪಟ್ಟ ವ್ಯವಹಾರಗಳ ಬಗ್ಗೆ. | ಜಂಟಿ ನಿರ್ದೇಶಕರು (ವೈದ್ಯಕೀಯ) | 22874196 | ಉಪ ನಿರ್ದೇಶಕರು (ವೈದ್ಯಕೀಯ) | 22874196 Extn: 344 | ಅಪರ ನಿರ್ದೇಶಕರು, (ಸಾರ್ವಜನಿಕ ಆರೋಗ್ಯ) | 22261650 Extn: 217 |
| 6 | ನೇತ್ರಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳ ಬಗ್ಗೆ. | ಜಂಟಿ ನಿರ್ದೇಶಕರು (ನೇತ್ರ) | 22875909 | – | - | ನಿರ್ದೇಶಕರು, ಆಕುಕ | 22870943 |
| 7 | ವೈದ್ಯರು ಹಾಗೂ ಇತರೆ ಸಿಬ್ಬಂದಿ ವರ್ಗದವರಿಗೆ ಆರೋಗ್ಯ ಕಾರ್ಯಕ್ರಮಕ್ಕೆ ತರಬೇತಿ ನೀಡುವ ವಿಚಾರದ ಬಗ್ಗೆ. | ಜಂಟಿ ನಿರ್ದೇಶಕರು (ಆರೋಗ್ಯ ಶಿಕ್ಷಣ ತರಬೇತಿ ಮತ್ತು ಮಾನಸಿಕ ಆರೋಗ್ಯ) | 22385683 | ತರಬೇತಿ ಅಧಿಕಾರಿಗಳು | 22873151 | ಅಪರ ನಿರ್ದೇಶಕರು, ರಾಜ್ಯ ಆರೋಗ್ಯ ಸಂಸ್ಥೆ. | 23206125 |

| ಕ್ರಮ ಸಂಖ್ಯೆ | ವಿಷಯಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷೆನ್ 5(1)ರಡಿ | ದೂರವಾಣಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷೆನ್ 5(2) | ದೂರವಾಣಿ | ಅಪೀಲು ಪ್ರಾಧಿಕಾರ ಸೆಕ್ಷೆನ್ 19(1) ರಡಿ | ದೂರವಾಣಿ |
|---|---|---|---|---|---|---|---|
| 8 | ಕುಷ್ಠರೋಗ ನಿಯಂತ್ರಣಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳು ಹಾಗೂ ಅದರ ನಿಯಂತ್ರಣ ಕೇಂದ್ರಗಳ ವಿವರಗಳ ಬಗ್ಗೆ. | ಜಂಟಿ ನಿರ್ದೇಶಕರು (ಕುಷ್ಠ) | 22351568 | ಉಪ ನಿರ್ದೇಶಕರು (ಕುಷ್ಠ) | 22873151 | ಯೋಜನಾ ನಿರ್ದೇಶಕರು (ಐ.ಡಿ.ಎಸ್.) | 22874929 |
| 9 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯಕ್ಕೆ ಸಂಬಂಧಪಟ್ಟ ಪ್ರಕಟಣೆಗಳನ್ನು ಮತ್ತು ವಿವರಗಳನ್ನು ನೀಡುವ ಬಗ್ಗೆ. | ಜಂಟಿ ನಿರ್ದೇಶಕರು (ಐ.ಇ.ಸಿ) | 22871046 | ಉಪ ನಿರ್ದೇಶಕರು (ಐ.ಇ.ಸಿ) | 22874016<br>22873151<br>Extn: 257 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) | 22201980 |
| 10 | ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯದ ಬಗ್ಗೆ ಹಾಗೂ ಶೀತಲ ಸರಪಳಿ (ಕೋಲ್ಡ್ ಚೈನ್) | ಜಂಟಿ ನಿರ್ದೇಶಕರು (ಆರ್.ಸಿ.ಹೆಚ್) | 22874929 | ಉಪ ನಿರ್ದೇಶಕರು (ಕುಟುಂಬ ಕಲ್ಯಾಣ) | 22873151<br>Extn: 246 | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) | 22201980 |
| 11 | ತಾಯಿ ಮತ್ತು ಮಕ್ಕಳ ಆರೋಗ್ಯದ ಬಗ್ಗೆ. | ಜಂಟಿ ಯೋಜನಾ ನಿರ್ದೇಶಕರು | 22874929 | ಉಪ ನಿರ್ದೇಶಕರು (ಎಂಪಿಹೆಚ್) | | ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) | 22201980 |
| 12 | ಪೌಷ್ಠಿಕ ಆಹಾರ ವಿಷಯಗಳ ಬಗ್ಗೆ. | ಉಪ ನಿರ್ದೇಶಕರು | 22873151<br>Extn: 249 | ಸೈಂಟಿಫಿಕ್ ಅಧಿಕಾರಿಗಳು (ಪೌಷ್ಠಿಕ ಆಹಾರ) | 22873151<br>Extn: 279 | ಅಪರ ನಿರ್ದೇಶಕರು, (ಸಾರ್ವಜನಿಕ ಆರೋಗ್ಯ) | 22261650 |
| 13 | ಆರೋಗ್ಯ ಸಲಕರಣೆ / ಉಪಕರಣಗಳ ಬಗ್ಗೆ. | ಅಪರ ನಿರ್ದೇಶಕರು, ಕರ್ನಾಟಕ ಡ್ರಗ್ಸ್ ಲಾಜಿಸ್ಟಿಕ್ ಸೊಸೈಟಿ, ಮಾಗಡಿ ರಸ್ತೆ, ಬೆಂಗಳೂರು. | 23281477 | ಆರೋಗ್ಯ ಸಲಕರಣಾಧಿಕಾರಿಗಳು | 22871351 | ನಿರ್ದೇಶಕರು ಆಕುಕ | 22870943 |

| ಕ್ರಮ ಸಂಖ್ಯೆ | ವಿಷಯಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷೆನ್ 5(1)ರಡಿ | ದೂರವಾಣಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷೆನ್ 5(2) | ದೂರವಾಣಿ | ಅಪೀಲು ಪ್ರಾಧಿಕಾರ ಸೆಕ್ಷೆನ್ 19(1) ರಡಿ | ದೂರವಾಣಿ |
|---|---|---|---|---|---|---|---|
| 14 | ಮಾನಸಿಕ ಆರೋಗ್ಯದ ಬಗ್ಗೆ. | ಜಂಟಿ ನಿರ್ದೇಶಕರು (ಆರೋಗ್ಯ ಶಿಕ್ಷಣ ತರಬೇತಿ ಮತ್ತು ಮಾನಸಿಕ ಆರೋಗ್ಯ) | 22385683 | ಉಪ ನಿರ್ದೇಶಕರು (ಮಾನಸಿಕ ಆರೋಗ್ಯ) | 22261650 | ನಿರ್ದೇಶಕರು ಆಕುಕ | 22870943 |
| 15 | ಔಷಧಿ ಖರೀದಿ, ಸರಬರಾಜು ಬಗ್ಗೆ. | ಅಪರ ನಿರ್ದೇಶಕರು, ಕರ್ನಾಟಕ ಡ್ರಗ್ಸ್ ಲಾಜಿಸ್ಟಿಕ್ ಸೊಸೈಟಿ, ಮಾಗಡಿ ರಸ್ತೆ, ಬೆಂಗಳೂರು. | 23281477 | ಮುಖ್ಯ ಮೇಲ್ವಿಚಾರಕರು, (ಕರ್ನಾಟಕ ಡ್ರಗ್ಸ್ ಲಾಜಿಸ್ಟಿಕ್ ಸೊಸೈಟಿ, ಮಾಗಡಿ ರಸ್ತೆ, ಬೆಂಗಳೂರು). | 23281477 | ನಿರ್ದೇಶಕರು ಆಕುಕ | 22870943 |
| 16 | ಕ್ಷಯರೋಗ ನಿಯಂತ್ರಣಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳು ಹಾಗೂ ಅದರ ನಿಯಂತ್ರಣಕ್ಕೆ ಕೈಗೊಳ್ಳುವ ವಿವರಗಳ ಬಗ್ಗೆ. | ಯೋಜನಾ ನಿರ್ದೇಶಕರು, (ಐ.ಡಿ.ಎಸ್.) | 22871950 | ಜಂಟಿ ನಿರ್ದೇಶಕರು (ಕ್ಷಯರೋಗ) | 22237093 | ನಿರ್ದೇಶಕರು ಆಕುಕ | 22870943 |
| 17 | ಆಹಾರ ಕಲಬೆರಿಕೆಯ ಬಗ್ಗೆ. | ಜಂಟಿ ನಿರ್ದೇಶಕರು (ಸಾರ್ವಜನಿಕ ಆರೋಗ್ಯ) | 22261650 Extn: 217 | ಉಪ ನಿರ್ದೇಶಕರು (ಸಾರ್ವಜನಿಕ ಆರೋಗ್ಯ) | | ಯೋಜನಾ ನಿರ್ದೇಶಕರು, (ಐ.ಡಿ.ಎಸ್.) | 22874929 |
| 18 | ಶಾಲಾ ಮಕ್ಕಳ ಆರೋಗ್ಯ ಮತ್ತು ಆರ್ಷ್ ಕಾರ್ಯಕ್ರಮ | ಉಪ ನಿರ್ದೇಶಕರು (ಶಾಲಾ ಆರೋಗ್ಯ) | 22261650 | – | - | ನಿರ್ದೇಶಕರು ಆಕುಕ | 22870943 |
| 19 | ಸಮುದಾಯ ಆರೋಗ್ಯ ಉಸ್ತುವಾರಿ (ಕಮ್ಯೂನಿಟಿ ಮಾನಿಟರಿಂಗ್) | ಉಪ ನಿರ್ದೇಶಕರು (ಕಮ್ಯೂನಿಟಿ ಮಾನಿಟರಿಂಗ್) | 22261650 | – | - | ನಿರ್ದೇಶಕರು ಆಕುಕ | 22870943 |

**ಮೇಲೆ ವಿವರಿಸಿದ ಎಲ್ಲಾ ಮಾಹಿತಿ ಅಧಿಕಾರಿಗಳು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ/ ಆಯುಕ್ತಾಲಯ, ಆನಂದರಾವ್ ವೃತ್ತ, ಬೆಂಗಳೂರು–9 ಇಲ್ಲಿ ಉಪಸ್ಥಿತರಿರುತ್ತಾರೆ.**

**V. ಅಭಿಯಾನದ ತಾತ್ಕಲಿಕ ಸಿಬ್ಬಂದಿ:**

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನವು ರಾಜ್ಯದಲ್ಲಿ ಕಾರ್ಯಕ್ರಮ ಅನುಷ್ಠಾನಕ್ಕಾಗಿ ಆರೋಗ್ಯ ಇಲಾಖೆಯ ಸಿಬ್ಬಂದಿಗೆ ಪೂರಕವಾಗಿ ಕೆಲಸ ನಿರ್ವಹಿಸಲು ಈ ಕೆಳಕಂಡ ತಾತ್ಕಾಲಿಕ ಸಿಬ್ಬಂದಿಯನ್ನು ನೇಮಕ ಮಾಡಿದೆ.

1. ರಾಜ್ಯ ಮಟ್ಟದಲ್ಲಿ ಸಲಹೆಗಾರರು – 5
2. ರಾಜ್ಯ ಲೆಕ್ಕ ಪತ್ರ ನಿರ್ವಹಣಾಧಿಕಾರಿಗಳು – 1
3. ಪ್ರೋಗ್ರಾಂಅಸಿಸ್ಟೆಂಟ್
4. ಚಾಟರ್ಡ್ ಅಕೌಟೆಂಟ್ – 1
5. ಅಭಿಯಾನ ನಿರ್ದೇಶಕರ ತಾಂತ್ರಿಕ ಸಹಾಯಕರು –1
6. ಡೇಟಾ ಎಂಟ್ರಿ ಆಪರೇಟರ್‌ಗಳು – 32
7. ವಾಹನ ಚಾಲಕರು – 12
8. ಗ್ರೂಪ್ ಡಿ – 14
9. ಸೆಕ್ಯೂರಿಟಿ – 3

ಮೇಲ್ಕಂಡ ಸಿಬ್ಬಂದಿಯಲ್ಲದೆ ಕಾರ್ಯಕ್ರಮ ಅನುಷ್ಠಾನಕ್ಕಾಗಿ ವಿವಿಧ ಕಾರ್ಯಕ್ರಮ ಅಧಿಕಾರಿಗಳು ಅವರ ಅಗತ್ಯತೆಗೆ ತಕ್ಕಂತೆ ತಾತ್ಕಾಲಿಕ ಸಿಬ್ಬಂದಿಯನ್ನು ನೇಮಕ ಮಾಡಿಕೊಂಡಿರುತ್ತಾರೆ.

ರಾಜ್ಯಾದ್ಯಂತ, 24x7 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಹೆರಿಗೆಗಳನ್ನು ಸಾಂಸ್ಥಿಕರಣಗೊಳಿಸುವ ಉದ್ದೇಶದಿಂದ ತೆರೆಯಲಾಗಿದೆ. ಬಹಳಷ್ಟು ಶಿಶುಮರಣ, ತಾಯಿಮರಣಗಳು ಮನೆಯಲ್ಲಿ ವೈದ್ಯರ ಉಪಸ್ಥಿತಿ ಇಲ್ಲದೆ ನಡೆಸಲ್ಪಡುವ ಹೆರಿಗೆಗಳಿಂದ ಆಗುತ್ತಿವೆ ಎಂಬ ವಿಷಯದ ಹಿನ್ನೆಲೆಯಲ್ಲಿ ಎಲ್ಲಾ ಹೆರಿಗೆಗಳು ಆಸ್ಪತ್ರೆಯಲ್ಲೇ ನಡೆಸಲ್ಪಡಬೇಕೆಂಬ ಉದ್ದೇಶದಿಂದ 24x7 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಸ್ಥಾಪಿಸಲ್ಪಟ್ಟಿವೆ. ಪ್ರತಿ ಇಂತಹ ಪ್ರಾಥಮಿಕ ಕೇಂದ್ರಗಳಲ್ಲಿ ಕನಿಷ್ಠ ಮೂರು ಜನ ಶುಶ್ರೂಷಕಿಯರು ಇರುವಂತೆ ನೋಡಿಕೊಳ್ಳಲಾಗುತ್ತಿದೆ. ಅಗತ್ಯಕ್ಕೆ ತಕ್ಕಂತೆ ಶುಶ್ರೂಷಕಿಯರನ್ನು ಗುತ್ತಿಗೆ ಆಧಾರದ ಮೇಲೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ನೇಮಕ ಮಾಡಿಕೊಳ್ಳಲು ಅಧಿಕಾರ ನೀಡಲಾಗಿದೆ.

ಆಸ್ಪತ್ರೆಯಲ್ಲಿ ಹೆರಿಗೆಯು ನಡೆಯುವಂತೆ ನೋಡಿಕೊಳ್ಳಲು, ಜನಸಾಮಾನ್ಯರಿಗೆ ನೆರವಾಗಲು, ಆಶಾ ಕಾರ್ಯಕರ್ತೆಯರನ್ನು ನೇಮಿಸಲಾಗಿದೆ. ಈ ಕಾರ್ಯಕರ್ತೆಯರು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ಕೆಲಸ ಕಾರ್ಯಗಳಿಗೆ ಪೂರಕವಾಗಿ ಕೆಲಸ ನಿರ್ವಹಿಸುತ್ತಾರೆ. ಅಭಿಯಾನವು ಒಂದು ಸಾವಿರ ಜನಸಂಖ್ಯೆಗೆ ಒಬ್ಬ ಆಶಾ ಕಾರ್ಯಕರ್ತೆಯಂತೆ ಆಶಾ ಕಾರ್ಯಕರ್ತೆಯರನ್ನು ಗುರುತಿಸಿದೆ. ಈ ಕಾರ್ಯಕರ್ತೆಯರು ಪ್ರಸವ ಪೂರ್ವ ಮತ್ತು ಪ್ರಸವಾ ನಂತರದಲ್ಲಿ ತಾಯಿ ಮತ್ತು ಶಿಶುವಿನ ಆರೋಗ್ಯವನ್ನು ಕಾಪಾಡುವಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತಾರೆ.

**VI. ಅಭಿಯಾನದಲ್ಲಿ ಕೆಲಸ ನಿರ್ವಹಿಸುತ್ತಿರುವ ಸರ್ಕಾರಿ ಸಿಬ್ಬಂದಿ**

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ | ದೂರವಾಣಿ ಸಂಖ್ಯೆ |
|---|---|---|
| 1. | ಶ್ರೀ. ಸೆಲ್ವಕುಮಾರ್,. ಐ.ಎ.ಎಸ್–ಅಭಿಯಾನ ನಿರ್ದೇಶಕರು | ದೂ. – 22373587, 22340086, ಫ್ಯಾಕ್ಸ್ 22340164<br>ಇಮೇಲ್ – mdnrhmkar@gmail.com |
| 2. | ಡಾ॥ ಎಂ. ಮೋಹನ್‌ರಾಜ್ – ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) | ದೂ. – 22201980<br>ಫ್ಯಾಕ್ಸ್ – 22870224<br>ಇಮೇಲ್ – pdrchkar@gmailcom |
| 3. | ಶ್ರೀ. ಕೆ.ಎನ್. ರಮೇಶ್., ಕೆ.ಎ.ಎಸ್ – ಮುಖ್ಯ ಆಡಳಿತಾಧಿಕಾರಿಗಳು | ದೂ. – 22341985<br>ಇಮೇಲ್ – nrhmspmukar@gmail.com |
| 4. | ಶ್ರೀ. ಜೆ. ಮಂಜುನಾಥ್ – ಮುಖ್ಯ ಹಣಕಾಸು ಅಧಿಕಾರಿಗಳು | ದೂ. – 22342023<br>ಇಮೇಲ್ – cfonrhmkar@gmail.com |

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ | ದೂರವಾಣಿ ಸಂಖ್ಯೆ |
|---|---|---|
| 5. | ಶ್ರೀ. ನಿಶ್ಚಿತ್ ಉಪ ಮುಖ್ಯ ಹಣಕಾಸು ಅಧಿಕಾರಿಗಳು | ದೂ. – 22342023<br>ಇಮೇಲ್ – tcf@gmail.com |

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಕಾರ್ಯಕ್ರಮದಲ್ಲಿ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೊಸೈಟಿಯು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಕಾರ್ಯಕ್ರಮ ಅನುಷ್ಠಾನಕ್ಕಾಗಿ ವಾರ್ಷಿಕ ಕಾರ್ಯಕ್ರಮ ಅನುಷ್ಠಾನ ವರದಿಯನ್ನು ಸಿದ್ಧಪಡಿಸಲಾಗುತ್ತದೆ (ಪಿ.ಐ.ಪಿ). ಕಾರ್ಯಕ್ರಮ ಅನುಷ್ಠಾನ ವರದಿಗೆ ಕೇಂದ್ರ ಸರ್ಕಾರದ ಅನುಮೋದನೆಯನ್ನು ದೊರಕಿಸಿಕೊಳ್ಳಲಾಗುತ್ತದೆ.

ಕಾರ್ಯಕ್ರಮ ಅನುಷ್ಠಾನ ವರದಿಯ ಪ್ರಕಾರ ವಿವಿಧ ಕಾರ್ಯಕ್ರಮಗಳಿಗೆ ಹಣವನ್ನು ಮೀಸಲಿಡಲಾಗುತ್ತದೆ. ಹೀಗೆ ಮೀಸಲಿಟ್ಟ ಹಣವನ್ನು ಜಿಲ್ಲೆಗಳಿಗೆ ಮತ್ತು ಕಾರ್ಯಕ್ರಮ ಅನುಷ್ಠಾನ ಅಧಿಕಾರಿಗಳಿಗೆ, ಅನುಷ್ಠಾನ ಕಾರ್ಯಕ್ಕಾಗಿ ಒದಗಿಸಲಾಗುತ್ತದೆ.

ಕಾರ್ಯಕ್ರಮ ಅನುಷ್ಠಾನಕ್ಕಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಆರೋಗ್ಯ ಸೊಸೈಟಿಗಳು ರಚಿತವಾಗಿವೆ. ಪ್ರತಿ ಜಿಲ್ಲಾ ಸೊಸೈಟಿಯು ರಾಜ್ಯ ಮಟ್ಟದ ಸೊಸೈಟಿಯಂತೆಯೆ ಆಡಳಿತ ಮಂಡಳಿ ಮತ್ತು ಕಾರ್ಯಕಾರಿ ಸಮಿತಿಯನ್ನು ಹೊಂದಿರುತ್ತದೆ. ಅಲ್ಲದೇ ಪ್ರತಿ ಜಿಲ್ಲೆಗೂ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಆರೋಗ್ಯ ಅಭಿಯಾನವು ರಚಿತವಾಗಿದೆ. ಜಿಲ್ಲಾ ಸೊಸೈಟಿಯ ಆಡಳಿತ ಮಂಡಳಿ ಮತ್ತು ಕಾರ್ಯಕಾರಿ ಸಮಿತಿಗೆ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಇವರು ಅಧ್ಯಕ್ಷರಾಗಿರುತ್ತಾರೆ. ಹಾಗೂ ಜಿಲ್ಲಾ ಆರ್.ಸಿ.ಹೆಚ್ ಅಧಿಕಾರಿಗಳು ಆಡಳಿತ ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಸೊಸೈಟಿಯ ಉಪಾಧ್ಯಕ್ಷರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದ ಕಾರ್ಯಕ್ರಮ ಸಂಬಂಧದ ಮಾಹಿತಿ ನೀಡಲು ಜಿಲ್ಲಾ ಕಾರ್ಯಕ್ರಮ ಅಧಿಕಾರಿಗಳು ಮಾಹಿತಿ ಅಧಿಕಾರಿಯಾಗಿರುತ್ತಾರೆ. ಹಾಗೂ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಅಪೀಲು ಪ್ರಾಧಿಕಾರಿಯಾಗಿರುತ್ತಾರೆ.

ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಮಾಹಿತಿ ಅಧಿಕಾರಿಯಾಗಿರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಅಪೀಲು ಪ್ರಾಧಿಕಾರಿಯಾಗಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕ ಮಾಹಿತಿಗಾಗಿ ಹೊರಡಿಸಲಾಗಿದೆ.

ಅಭಿಯಾನ ನಿರ್ದೇಶಕರು

ಪಿ.ಆರ್.1299 ರಾಷ್ಟೀಯ ಗ್ರಾಮೀಣ ಅರೋಗ್ಗ ಅಭಿಯಾನ

## ಕರ್ನಾಟಕ ಸರ್ಕಾರ

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ನಂ. 720, ಶಿಂಷಾ ಭವನ, 46ನೇ ಅಡ್ಡರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು ಇವರ ನಡವಳಿಗಳು

## ರದ್ದತಿ ಆದೇಶ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜವಾನರ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ತಾತ್ಕಾಲಿಕವಾಗಿ ಹೆಚ್ಚುವರಿ ಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾದ ಇಂದ್ರಮ್ಮ W/O ಲೇಟ್ ಪರಶುರಾಮ ಹೆಚ್.ಹೆಚ್. ಹರಿಹರ ಇವರ ತಾತ್ಕಾಲಿಕ ಆಯ್ಕೆಯನ್ನು ಹೆಚ್ಚುವರಿ ಪಟ್ಟಿಯಿಂದ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21–11–01 (ದಿನಾಂಕ: 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಸೆನೆನಿ 2001 ದಿನಾಂಕ: 13–02–2001

3) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್ಎಡಿ 97 ದಿನಾಂಕ:08–02–2000

4) ಸರ್ಕಾರ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ: 01–06–2002 (ದಿನಾಂಕ: 14–06–2002 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
5) ಸರ್ಕಾರದ ಆದೇಶ ಸಂಖ್ಯೆ: ಸಿಅಸುಇ 97 ಸೆನೆನಿ 2002 ದಿನಾಂಕ: 22–11–2002
6) ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 4–5–04 (ದಿನಾಂಕ: 06–05–2004 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
7) ಈ ಕಛೇರಿಯ ಸಮಸಂಖ್ಯೆ ಜವಾನರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ:16.09.2005.
8) ಈ ಕಛೇರಿಯ ಸಮಸಂಖ್ಯೆ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ: 21–07–2010.
9) ಈ ಕಛೇರಿಯ ಸಮಸಂಖ್ಯೆ ಹಿಂಬರಹ ದಿನಾಂಕ: 23–07–2010.
10) ಈ ಕಛೇರಿಯ ಸಮಸಂಖ್ಯೆ ಜ್ಞಾಪನ ದಿನಾಂಕ: 9–8–2010.
11) ಹಿರಿಯ ಉಪ ನೋಂದಣಾಧಿಕಾರಿ ಹರಿಹರ ಇವರ ಪತ್ರ ಸಂಖ್ಯೆ: ಉನೋಕಹ/ಸಿಬ್ಬಂದಿ/210/10–11 ದಿನಾಂಕ: 16–08–2010.

**ಪ್ರಸ್ತಾವನೆ:**

ಈ ಇಲಾಖೆಯ ಜವಾನರ ವೃಂದದಲ್ಲಿ ಉಲ್ಲೇಖ (1) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳ ಅಡಿಯಲ್ಲಿ ಪರಿಶಿಷ್ಟ ಜಾತಿಯ ಹತ್ತೊಂಭತ್ತು ಮತ್ತು ಪರಿಶಿಷ್ಟ ಪಂಗಡದ ಹದಿನೇಳು ಈ ರೀತಿ ಒಟ್ಟು ಮೂವತ್ತಾರು ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿ ಈ ಹುದ್ದೆಗಳನ್ನು ರಾಜ್ಯಾದ್ಯಂತ ಭರ್ತಿ ಮಾಡುವುದಕ್ಕಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (6) ರ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಕರೆದಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯು ನಿಗದಿತ ನಮೂನೆಯ ಅರ್ಜಿಯೊಂದಿಗೆ ಸಲ್ಲಿಸಿದ 1980–81ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯ ಜೆರಾಕ್ಸ್ ಪ್ರತಿಯ ಆಧಾರದ ಮೇಲೆ ಸದರಿ ಅಭ್ಯರ್ಥಿಯು ಹೆಚ್ಚು ಶೇಕಡಾವಾರು ಅಂಕಗಳಿಸಿರುವರೆಂದು ಭಾವಿಸಿ, ಒಟ್ಟಾರೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ Merit ಮತ್ತು ಮೀಸಲಾತಿ ಪ್ರಕಾರ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ (8) ರನ್ವಯ ಪ್ರಕಟಿಸಿ ಸದರಿ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಪರಿಶಿಷ್ಟ ಪಂಗಡದ ಜವಾನರ ಹೆಚ್ಚುವರಿ ಪಟ್ಟಿಯಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಮಹಿಳಾ ಅಭ್ಯರ್ಥಿಯಾಗಿ ಕೇವಲ ತಾತ್ಕಾಲಿಕವಾಗಿ ಆಯ್ಕೆ ಮಾಡಲಾಯಿತು.

| ಕ್ರ.ಸಂ | ಅಭ್ಯರ್ಥಿಯ ಹೆಸರು | SC/ST | ತಾತ್ಕಾಲಿಕವಾಗಿ ಜವಾನರೆಂದು ಆಯ್ಕೆ ಮಾಡಿದ ಮೀಸಲಾತಿ ವರ್ಗೀಕರಣ |
|---|---|---|---|
| 1 | ಇಂದ್ರಮ್ಮ<br>W/O ಲೇಟ್ ಪರಶುರಾಮ ಹೆಚ್.ಹೆಚ್.<br>ಶ್ರೀ ಸಂಗಮೇಶ್ವರ ದೇವಸ್ಥಾನದ ಪಕ್ಕ<br>ಹಳ್ಳದಕೇರಿ, ಶಿವಮೊಗ್ಗ ರೋಡ್,<br>ಹರಿಹರ, ದಾವಣಗೆರೆ ಜಿಲ್ಲೆ–577601 | ST | ಪರಿಶಿಷ್ಟ ಪಂಗಡ<br>ಮಹಿಳಾ ಅಭ್ಯರ್ಥಿ<br>ಹೆಚ್ಚುವರಿ ಪಟ್ಟಿ |

ಈ ರೀತಿ ಮೇಲ್ಕಂಡ ಅಭ್ಯರ್ಥಿಯನ್ನು ತಾತ್ಕಾಲಿಕವಾಗಿ ಆಯ್ಕೆ ಮಾಡಿದ ಹಿನ್ನೆಲೆಯಲ್ಲಿ ಸದರಿ ಅಭ್ಯರ್ಥಿಯು ಜವಾನರ ಬ್ಯಾಕ್‌ಲಾಗ್ ಹುದ್ದೆಯ ನಿಗದಿತ ಅರ್ಜಿಯೊಂದಿಗೆ ಸಲ್ಲಿಸಿದ ಜೆರಾಕ್ಸ್ ದಾಖಲೆಗಳ ಮೂಲ ದಾಖಲೆಗಳನ್ನು ಈ ಕಛೇರಿಯ ಪರಿಶೀಲನೆಗಾಗಿ ಖುದ್ದು ಹಾಜರಾಗಿ ಸಲ್ಲಿಸುವಂತೆ ಸೂಚಿಸಿ ಉಲ್ಲೇಖ (9) ರ ಹಿಂಬರವನ್ನು ಸದರಿ ಅಭ್ಯರ್ಥಿಗೆ RPAD ಮೂಲಕ ಕಳುಹಿಸಲಾಯಿತು.

ಆದರೆ ಸದರಿ ಹಿಂಬರಹವು ಮೇಲ್ಕಂಡ ಅಭ್ಯರ್ಥಿಗೆ ತಲುಪದೇ "Addressee Expired" ಎಂಬ ಷರಾದೊಂದಿಗೆ ಅಂಚೆ ಇಲಾಖೆಯಿಂದ ಈ ಕಛೇರಿಗೆ ವಾಪಸ್ ಬಂದ ಕಾರಣ ಮೇಲ್ಕಂಡ ಅಭ್ಯರ್ಥಿಯು ಮರಣ ಹೊಂದಿರುವರೇ? ಎಂಬುದನ್ನು ತಿಳಿದುಕೊಂಡು ಸದರಿಯವರು ಮರಣ ಹೊಂದಿದ್ದಲ್ಲಿ ಅವರ ಮರಣ ಪ್ರಮಾಣ ಪತ್ರವನ್ನು ಪಡೆದು ಅದನ್ನು ಈ ಕಛೇರಿಗೆ ಕಳುಹಿಸುವಂತೆ ಉಪ ನೋಂದಣಾಧಿಕಾರಿ, ಹರಿಹರ ಇವರಿಗೆ ಉಲ್ಲೇಖ (10) ರನ್ವಯ ಸೂಚಿಸಲಾಯಿತು.

ಇದಕ್ಕೆ ಉತ್ತರವಾಗಿ ಹಿರಿಯ ಉಪ ನೋಂದಣಾಧಿಕಾರಿ, ಹರಿಹರ ಇವರು ಉಲ್ಲೇಖ (11) ರನ್ವಯ ಸದರಿ ಮೆಲ್ಕಂಡ ಅಭ್ಯರ್ಥಿಯು ದಿನಾಂಕ:8–3–2007 ರಂದು ಮರಣ ಹೊಂದಿರುವರೆಂದು ತಿಳಿಸುತ್ತಾ, ಮೇಲ್ಕಂಡ ಅಭ್ಯರ್ಥಿಯ ಮರಣ ಪ್ರಮಾಣ ಪತ್ರವನ್ನು ಹರಿಹರ ನಗರಸಭೆಯಿಂದ ಪಡೆದು ಅದನ್ನು ಈ ಕಛೇರಿಗೆ ಕಳುಹಿಸಿರುತ್ತಾರೆ.

ಈ ರೀತಿ ಮೇಲ್ಕಂಡ ಅಭ್ಯರ್ಥಿಯು ಈಗಾಗಲೇ ಮರಣ ಹೊಂದಿರುವುದರಿಂದ ಉಲ್ಲೇಖ (8) ರನ್ವಯ ದಿನಾಂಕ: 21–7–2010 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಪಂಗಡದ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಜವಾನರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಸದರಿ ಮೇಲ್ಕಂಡ ಇಂದ್ರಮ್ಮ ಎಂಬ ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿಯ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (8) ರ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಿಂದ ಶಾಶ್ವತವಾಗಿ ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ–2–235/03–04, ದಿನಾಂಕ:28–08–2010**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (8) ರನ್ವಯ ದಿನಾಂಕ: 21–07–2010 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಪಂಗಡದ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಜವಾನರೆಂದು ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿಯಾದ ಶ್ರೀಮತಿ ಇಂದ್ರಮ್ಮ W/O ಲೇಟ್ ಪರಶುರಾಮ ಹೆಚ್.ಹೆಚ್. ಶ್ರೀ ಸಂಗಮೇಶ್ವರ ದೇವಸ್ಥಾನದ ಪಕ್ಕ, ಹಳ್ಳದಕೇರಿ, ಶಿವಮೊಗ್ಗ ರೋಡ್, ಹರಿಹರ, ದಾವಣಗೆರೆ ಜಿಲ್ಲೆ–577601 ಇವರ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (8) ರ ಸದರಿ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಪರಿಶಿಷ್ಟ ಪಂಗಡದ ಹೆಚ್ಚುವರಿ ಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ರದ್ದುಪಡಿಸಲಾಗಿದೆ ಅಂದರೆ Cancel ಮಾಡಲಾಗಿದೆ.

| ಕ್ರ. ಸಂ. | ಅಭ್ಯರ್ಥಿ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 3–7–04 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| **1** | **2** | **3** | **4** | **5** | **6** |
| 1 | ಇಂದ್ರಮ್ಮ (ST) W/O ಲೇಟ್ ಪರಶುರಾಮ ಹೆಚ್.ಹೆಚ್. ಶ್ರೀ ಸಂಗಮೇಶ್ವರ ದೇವಸ್ಥಾನದ ಪಕ್ಕ ಹಳ್ಳದಕೇರಿ, ಶಿವಮೊಗ್ಗ ರೋಡ್, ಹರಿಹರ, ದಾವಣಗೆರೆ ಜಿಲ್ಲೆ–577601 | 01.06.1967 | 37.01.02 | ಏಳನೇ ತರಗತಿ 71.091 | ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿಯಾಗಿ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ಈ ಮೂಲಕ ರದ್ದುಪಡಿಸಿದೆ |

ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ
ಆಯುಕ್ತರು, ಬೆಂಗಳೂರು

**ಕರ್ನಾಟಕ ಸರ್ಕಾರ**

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ನಂ. 720, ಶಿಂಷಾ ಭವನ, 46ನೇ ಅಡ್ಡರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು ಇವರ ನಡವಳಿಗಳು**

**ರದ್ದತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜವಾನರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ತಾತ್ಕಾಲಿಕವಾಗಿ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ದೇವೇಂದ್ರಪ್ಪ ಹನುಮಂತಪ್ಪ ಹರಿಜನ ಸಾ: ತಿಮ್ಮಾಪುರ, ರಾಣಿಬೆನ್ನೂರು ತಾಲ್ಲುಕ್ ಇವರ ತಾತ್ಕಾಲಿಕ ಆಯ್ಕೆಯನ್ನು ಹೆಚ್ಚುವರಿ ಪಟ್ಟಿಯಿಂದ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21–11–01 (ದಿನಾಂಕ: 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2) ಸರ್ಕಾರದ ಆದೇಶ ಸಂಖ್ಯೆ: ಸಿಅಸುಇ 06 ಸೆನೆನಿ 2001 ದಿನಾಂಕ: 13–02–2001
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ:–08–02–2000
4) ಸರ್ಕಾರ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ: 01–06–2002 (ದಿನಾಂಕ: 14–06–2002 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
5) ಸರ್ಕಾರದ ಆದೇಶ ಸಂಖ್ಯೆ: ಸಿಅಸುಇ 97 ಸೆನೆನಿ 2002 ದಿನಾಂಕ: 22–11–2002
6) ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 4–5–04 (ದಿನಾಂಕ: 06–05–2004 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
7) ಈ ಕಛೇರಿಯ ಸಮಸಂಖ್ಯೆ ಜವಾನರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ:16.09.2005.
8) ಈ ಕಛೇರಿಯ ಸಮಸಂಖ್ಯೆ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ: 21–07–2010.
9) ಈ ಕಛೇರಿಯ ಸಮಸಂಖ್ಯೆ ಹಿಂಬರಹ ದಿನಾಂಕ: 23–07–2010.
10) ದೇವೇಂದ್ರಪ್ಪ ಹನುಮಂತಪ್ಪ ಹರಿಜನ ಸಾ: ತಿಮ್ಮಾಪುರ ಇವರ ಲಿಖಿತ ಮನವಿ ದಿನಾಂಕ:7.8.2010.

**ಪ್ರಸ್ತಾವನೆ:**

ಈ ಇಲಾಖೆಯ ಜವಾನರ ವೃಂದದಲ್ಲಿ ಉಲ್ಲೇಖ (1) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳ ಅಡಿಯಲ್ಲಿ ಪರಿಶಿಷ್ಟ ಜಾತಿಯ ಹತ್ತೊಂಭತ್ತು ಮತ್ತು ಪರಿಶಿಷ್ಟ ಪಂಗಡದ ಹದಿನೇಳು ಈ ರೀತಿ ಒಟ್ಟು ಮೂವತ್ತಾರು ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿ ಈ ಹುದ್ದೆಗಳನ್ನು ರಾಜ್ಯಾದ್ಯಂತ ಭರ್ತಿ ಮಾಡುವುದಕ್ಕಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (6) ರ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಕರೆದಿದ್ದರ ಮೇರೆ ಕೆಳಕಂಡ ಅಭ್ಯರ್ಥಿಯು ನಿಗದಿತ ನಮೂನೆಯ ಅರ್ಜಿಯೊಂದಿಗೆ ಸಲ್ಲಿಸಿದ 1987–88ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯ ಜೆರಾಕ್ಸ್ ಪ್ರತಿಯ ಆಧಾರದ ಮೇಲೆ ಸದರಿ ಅಭ್ಯರ್ಥಿಯು ಹೆಚ್ಚು ಶೇಕಡಾವಾರು ಅಂಕಗಳಿಸಿರುವರೆಂದು ಭಾವಿಸಿ, ಒಟ್ಟಾರೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ Merit ಮತ್ತು ಮೀಸಲಾತಿ ಪ್ರಕಾರ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ (8) ರನ್ವಯ ಪ್ರಕಟಿಸಿ ಸದರಿ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಪರಿಶಿಷ್ಟ ಜಾತಿಯ ಜವಾನರ ಹೆಚ್ಚುವರಿ ಪಟ್ಟಿಯಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಕೇವಲ ತಾತ್ಕಾಲಿಕವಾಗಿ ಆಯ್ಕೆ ಮಾಡಲಾಯಿತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು | SC/ST | ತಾತ್ಕಾಲಿಕವಾಗಿ ಜವಾನರೆಂದು ಆಯ್ಕೆ ಮಾಡಿದ ಮೀಸಲಾತಿ ವರ್ಗೀಕರಣ |
|---|---|---|---|
| 1 | ದೇವೇಂದ್ರಪ್ಪ ಹನುಮಂತಪ್ಪ ಹರಿಜನ<br>ಸಾ: ತಿಮ್ಮಾಪುರ<br>ಪೋಸ್ಟ್ ಚೌಡದಾನಪುರ<br>ತಾಲ್ಲೂಕು: ರಾಣಿಬೆನ್ನೂರ, ಜಿಲ್ಲೆ: ಹಾವೇರಿ | SC | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತಾ ಅಭ್ಯರ್ಥಿ<br>ಹೆಚ್ಚುವರಿ ಪಟ್ಟಿ |

ಈ ರೀತಿ ಮೇಲ್ಕಂಡ ಅಭ್ಯರ್ಥಿಯನ್ನು ತಾತ್ಕಾಲಿಕವಾಗಿ ಆಯ್ಕೆ ಮಾಡಿದ ಹಿನ್ನೆಲೆಯಲ್ಲಿ ಸದರಿ ಅಭ್ಯರ್ಥಿಯು ಜವಾನರ ಬ್ಯಾಕ್‌ಲಾಗ್ ಹುದ್ದೆಯ ನಿಗದಿತ ಅರ್ಜಿಯೊಂದಿಗೆ ಸಲ್ಲಿಸಿದ ಜೆರಾಕ್ಸ್ ದಾಖಲೆಗಳ ಮೂಲ ದಾಖಲೆಗಳನ್ನು ಈ ಕಛೇರಿಯ ಪರಿಶೀಲನೆಗಾಗಿ ಖುದ್ದು ಹಾಜರಾಗಿ ಸಲ್ಲಿಸುವಂತೆ ಸೂಚಿಸಿ ಉಲ್ಲೇಖ (9) ರ ಹಿಂಬರವನ್ನು ಸದರಿ ಅಭ್ಯರ್ಥಿಗೆ RPAD ಮೂಲಕ ಕಳುಹಿಸಲಾಯಿತು.

ಇದಕ್ಕೆ ಉತ್ತರವಾಗಿ ಮೇಲ್ಕಂಡ ಅಭ್ಯರ್ಥಿಯು ಉಲ್ಲೇಖ (10) ರನ್ವಯ ಲಿಖಿತ ಮನವಿಯೊಂದನ್ನು ಈ ಕಛೇರಿಗೆ ಸಲ್ಲಿಸಿ, ತಾವು ಈಗಾಗಲೇ ಸರ್ಕಾರಿ ಪ್ರೌಢಶಾಲೆ, ಯತ್ನಟ್ಟಿ, ಬಾದರದಿನ್ನಿ, ತಾಲ್ಲೂಕ್ ಬೀಳಗಿ, ಜಿಲ್ಲೆ ಬಾಗಲಕೋಟೆ ಇಲ್ಲಿ ಸಹಶಿಕ್ಷಕರಾಗಿ ಕೆಲಸ ನಿರ್ವಹಿಸುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆಯಾಗಿರುವ ತಮ್ಮ ಆಯ್ಕೆಯನ್ನು ಕಡಿತಗೊಳಿಸುವಂತೆ ತಮ್ಮ ಸ್ವ ಇಚ್ಛೆಯಿಂದ ಉಲ್ಲೇಖ (10) ರ ಲಿಖಿತ ಮನವಿಯಲ್ಲಿ ವಿನಂತಿಸಿರುತ್ತಾರೆ.

ಮೇಲ್ಕಂಡ ಕಾರಣಗಳಿಂದ ಉಲ್ಲೇಖ (8) ರನ್ವಯ ದಿನಾಂಕ: 21-7-2010 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಸದರಿ ಮೇಲ್ಕಂಡ ದೇವೇಂದ್ರಪ್ಪ ಹನುಮಂತಪ್ಪ ಹರಿಜನ ಎಂಬ ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯ ತಾತ್ಕಾಲಿಕ ಆಯ್ಕೆಯನ್ನು ಸದರಿಯವರ ಕೋರಿಕೆಯಂತೆ ಉಲ್ಲೇಖ (8) ರ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಿಂದ ಶಾಶ್ವತವಾಗಿ ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ-2-235/03-04, ದಿನಾಂಕ:28-08-2010**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (8) ರನ್ವಯ ದಿನಾಂಕ:21-07-2010 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರೆಂದು ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾದ ಶ್ರೀ ದೇವೇಂದ್ರಪ್ಪ ಹನುಮಂತಪ್ಪ ಹರಿಜನ ಸಾ: ತಿಮ್ಮಾಪುರ ಪೋಸ್ಟ್ ಚೌಡದಾನಪುರ ತಾಲ್ಲೂಕು: ರಾಣಿಬೆನ್ನೂರ ಜಿಲ್ಲೆ: ಹಾವೇರಿ ಇವರ ತಾತ್ಕಾಲಿಕ ಆಯ್ಕೆಯನ್ನು ಇವರ ಕೋರಿಕೆಯಂತೆ ಉಲ್ಲೇಖ (8) ರ ಸದರಿ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಪರಿಶಿಷ್ಟ ಜಾತಿಯ ಹೆಚ್ಚುವರಿ ಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ರದ್ದುಪಡಿಸಲಾಗಿದೆ ಅಂದರೆ Cancel ಮಾಡಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾದ ಶ್ರೀ ದೇವೇಂದ್ರಪ್ಪ ಹನುಮಂತಪ್ಪ ಹರಿಜನ ಸಾ: ತಿಮ್ಮಾಪುರ ತಾಲ್ಲೂಕು: ರಾಣಿಬೆನ್ನೂರು ಇವರು ಇನ್ನು ಮುಂದೆ ಈ ಇಲಾಖೆಯ ಜವಾನರ ಹುದ್ದೆಯ ಮೇಲೆ ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಅಂದರೆ ಸದರಿಯವರು ನೇಮಕಾತಿ ಹಕ್ಕನ್ನು ಕಳೆದುಕೊಂಡಿರುತ್ತಾರೆಂದು ಮತ್ತು ಸದರಿಯವರು ಈ ಇಲಾಖೆಯ ಜವಾನರ ಹುದ್ದೆಯ ಮೇಲೆ ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 3-7-04 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1 | ದೇವೇಂದ್ರಪ್ಪ ಹನುಮಂತಪ್ಪ ಹರಿಜನ ಸಾ: ತಿಮ್ಮಾಪುರ ಪೋಸ್ಟ್ ಚೌಡದಾನಪುರ ತಾಲ್ಲೂಕು: ರಾಣಿಬೆನ್ನೂರ ಜಿಲ್ಲೆ: ಹಾವೇರಿ | 15.09.1974 | 29.09.18 | ಏಳನೇ ತರಗತಿ 89.000 | ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ಈ ಮೂಲಕ ರದ್ದುಪಡಿಸಿದೆ |

ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ
ಆಯುಕ್ತರು, ಬೆಂಗಳೂರು

ಪಿ.ಆರ್.1330

**ಆರ್ಥಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಆಇ 117 ವಾತೆಸಿ 2010, ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2010**

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಅಧಿಕಾರಿ ವೃಂದದ ದಿನಾಂಕ:17-01-1993 ರಿಂದ 31-12-2009 ರವರೆಗಿನ ಮುಂದುವರೆದ ಅವಧಿಯ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 220 ವಾತೆಸಿ 94 ದಿನಾಂಕ:04-05-1996.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 59 ವಾತೆಸಿ 2004 ದಿನಾಂಕ:20-06-2005.

3) ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ-1/ ಜಿಪಿಸಿಆರ್-40/2005-06 ದಿನಾಂಕ:19/03/2010.

ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆ ಅಧಿಕಾರಿ ವೃಂದಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ:01-11-1956 ರಿಂದ 16-01-1993 ರವರೆಗೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು.

ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 1 ಎಸ್‌ಆರ್‌ಡಿ 2001, ದಿನಾಂಕ:06.05.2002 ರಲ್ಲಿ ಕರ್ನಾಟಕ ವಾಣಿಜ್ಯ ತೆರಿಗೆಗಳ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ 13-10-1997 ರಂದು ಖಾಲಿ ಇದ್ದ 252 ನೇರ ನೇಮಕಾತಿ ರಿಕ್ತ ಸ್ಥಾನಗಳನ್ನು ಪದೋನ್ನತಿಗೆ ವರ್ಗಾಯಿಸಿ ಆದೇಶ ಹೊರಡಿಸಲಾಗಿತ್ತು. ಅದಕ್ಕನುಗುಣವಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 27 ವಾತೆಸಿ 2004 ದಿನಾಂಕ:29-04-2004 ರಲ್ಲಿ ವರ್ಗಾವಣೆ ಮಾಡಿದ 252 ನೇರ ನೇಮಕಾತಿ ರಿಕ್ತ ಸ್ಥಾನಗಳು ಒಳಗೊಂಡಂತೆ ಒಟ್ಟು 372 ರಿಕ್ತ ಸ್ಥಾನಗಳಿಗೆ ವಾಣಿಜ್ಯ ತೆರಿಗೆ ಪರಿವೀಕ್ಷಕರನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ ಸಕ್ರಮಗೊಳಿಸಲಾಗಿತ್ತು.

ದಿನಾಂಕ:29-04-2004ರ ಆದೇಶವನ್ನು ಆಧರಿಸಿ, ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದಲ್ಲಿ ಪೂರ್ವಭಾವಿ ಜೇಷ್ಠತಾ ಪಟ್ಟಿಯನ್ನು ಅಂದರೆ ದಿನಾಂಕ:17.01.1993 ರಿಂದ ಬ್ಲಾಕ್ ಸಂಖ್ಯೆ: 24, 25 ಮತ್ತು 26 ರ ದಿನಾಂಕ:13.10.1997 ರವರೆಗೆ ಅಧಿಕಾರಿಗಳನ್ನು ನಮೂದಿಸಿ, ಉಲ್ಲೇಖ(2) ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 59 ವಾತೆಸಿ 2004 ದಿನಾಂಕ: 20-06-2005 ರಂದು ಕರ್ನಾಟಕ ರಾಜ್ಯ ಪತ್ರ ವಿಶೇಷ ಪತ್ರಿಕೆ ಭಾಗ-3 ರಲ್ಲಿ ಪ್ರಕಟಿಸಲಾಗಿತ್ತು. ಆ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಲಾಗಿರುವುದಿಲ್ಲ.

ಗ್ರೂಪ್-ಸಿ ವೃಂದದಲ್ಲಿರುವ ವಾಣಿಜ್ಯ ತೆರಿಗೆ ಪರಿವೀಕ್ಷಕರ ವೃಂದ, ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದಕ್ಕೆ ಪದೋನ್ನತಿಗೆ ಪೂರಕವಾದ ಹುದ್ದೆಯಾಗಿರುತ್ತದೆ. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ:114-127/2010, ಸಿಡಬ್ಲ್ಯೂ ಅರ್ಜಿ ಸಂಖ್ಯೆ:150/2010, 264-275/2010, 501-504/2010, 5200-5204/2009, 5142/2009, 4880/2009/ 571-585/2009 ಮತ್ತು 962/2010 ರ ಪ್ರಕರಣಗಳಲ್ಲಿ ವಾಣಿಜ್ಯ ತೆರಿಗೆ ಪರಿವೀಕ್ಷಕರ ಮತ್ತು ಇತರೇ ವೃಂದಗಳ ಜೇಷ್ಠತಾ ಪಟ್ಟಿಗಳನ್ನು ಹೊಸದಾಗಿ ತಯಾರಿಸಿ ಪ್ರಕಟಿಸುವಂತೆ ಆದೇಶಿಸಿರುತ್ತದೆ. ಅದಕ್ಕನುಗುಣವಾಗಿ ಈಗಾಗಲೇ ದಿನಾಂಕ:31-12-2008ರವರೆಗೆ ಸಿ ಮತ್ತು ಡಿ ಗುಂಪಿನ ವೃಂದಗಳಲ್ಲಿ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಈ ಅಂತಿಮ ಜ್ಯೇಷ್ಠತಾ ಪಟ್ಟಿಯ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರಿಂದ ವಾಣಿಜ್ಯ ತೆರಿಗೆ ನಿರೀಕ್ಷಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ. ಈ ಸ್ಥಾನಪನ್ನ ಮುಂಬಡ್ತಿ ನೀಡಿದ ನೌಕರರನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಗೆ ಅಳವಡಿಸುವ ಉದ್ದೇಶದಿಂದ ದಿನಾಂಕ:21-05-2010ರಂದು ದಿನಾಂಕ:17-01-1993 ರಿಂದ ದಿನಾಂಕ:31-12-2009ರ ಅಂತ್ಯದವರೆಗೆ ಪೂರ್ವಭಾವಿ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಈ ಪೂರ್ವಭಾವಿ ಜ್ಯೇಷ್ಠತಾ ಪಟ್ಟಿಗೆ ಆಕ್ಷೇಪಣೆಗಳು ಬಂದಿದ್ದು ಅವು ಪರಿಶೀಲನಾ ಹಂತದಲ್ಲಿವೆ.

ಸರ್ಕಾರದ 2002ರ ತಿದ್ದುಪಡಿಯಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದಲ್ಲಿ ನೇರ ನೇಮಕಾತಿಯಿಂದ ಪದೋನ್ನತಿ ಕೋಟಾಗೆ ವರ್ಗಾವಣೆ ಮಾಡಿದ 252 ರಿಕ್ತ ಸ್ಥಾನಗಳನ್ನು ಕಾಲಕಾಲಕ್ಕೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ನೀಡಿದ ಸುತ್ತೋಲೆಯನ್ನು ಆಧರಿಸಿ, ದಿನಾಂಕ: 01-11-1956 ರಿಂದ 31-12-2009 ರವರೆವಿಗೂ ಉಂಟಾದ ನಿವೃತ್ತಿ, ಮರಣ, ಪದೋನ್ನತಿ, ರಾಜೀನಾಮೆ ಮತ್ತು ಹೊಸದಾಗಿ ಸೃಜಿಸಿದ ಮತ್ತು ರದ್ದುಪಡಿಸಿದ ಹುದ್ದೆಗಳ ಮಾಹಿತಿಯನ್ನು ಆಧರಿಸಿ, ನೇರ ನೇಮಕಾತಿಯಾದ ದಿನಾಂಕಕ್ಕೆ/ವೃಂದ ಮತ್ತು ನೇಮಕಾತಿಯಲ್ಲಿನ ತಿದ್ದುಪಡಿಯ ದಿನಾಂಕಕ್ಕೆ ಸರ್ವೋಚ್ಚ ನ್ಯಾಯಾಲಯ ನಿರ್ದೇಶಿಸಿದ ಮಾದರಿಯಲ್ಲಿಯೇ ಬ್ಲಾಕ್‌ಗಳ ಅವಧಿಗಳನ್ನು ರಚಿಸಲಾಗಿದೆ. ಈ ಹಿಂದೆ ರಿಕ್ತ ಸ್ಥಾನಗಳ ಆಧಾರದ ಮೇಲೆ ಪ್ರಕಟಿಸಿದ ಜೇಷ್ಠತಾ ಪಟ್ಟಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ನೀಡಿದ ಸುತ್ತೋಲೆಯನ್ವಯ ಪ್ರತಿ ಬ್ಲಾಕ್

ಅವಧಿಯಲ್ಲಿ ಉಂಟಾದ ರಿಕ್ತ ಸ್ಥಾನಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನಿಗಧಿಪಡಿಸಿದ ಅನುಪಾತದಂತೆ ನೇರ ನೇಮಕಾತಿಯಿಂದ ಉಂಟಾದ ರಿಕ್ತ ಸ್ಥಾನಗಳನ್ನು ನೇರ ನೇಮಕಾತಿಗೂ, ಪದೋನ್ನತಿಯಿಂದ ತೆರವಾದ ಸ್ಥಾನಗಳನ್ನು ಪದೋನ್ನತಿಗೂ ಪರಿಗಣಿಸಿ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 48 ಎಸ್‌ಎಸ್‌ಆರ್ 75 ದಿನಾಂಕ: 05.07.1976, ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 43 ಸೆಸೇನಿ 87 ದಿನಾಂಕ: 14.12.1987 ಅಧಿಕೃತ ಜ್ಞಾಪನ ಸಂಖ್ಯೆ:ಡಿಪಿಎಆರ್ 7 ಸೆಸೇನಿ 96 ದಿನಾಂಕ:16–07–1996 ರಲ್ಲಿನ ಸೂಚನೆಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಪೋಷಕ ವೃಂದವಾದ ವಾಣಿಜ್ಯ ತೆರಿಗೆ ಪರಿವೀಕ್ಷಕರ ಅಂತಿಮ ಜೇಷ್ಠತಾ ಪಟ್ಟಿಯನ್ನು ಹಾಗೂ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು ಮತ್ತು ಅದರಡಿಯಲ್ಲಿ ಹೊರಡಿಸಲಾದ ಸುತ್ತೋಲೆ ಸಂಖ್ಯೆ: ಡಿಪಿಎಆರ್ 3 ಎಸ್‌ಎಸ್‌ಆರ್ 81 ದಿನಾಂಕ:06–02–1981 ರಲ್ಲಿನ ಸೂಚನೆಗಳ ಹಿನ್ನೆಲೆಯಲ್ಲಿ ಅಧಿಕಾರಿಗಳು ಕರ್ನಾಟಕ ಲೋಕಸೇವಾ ಆಯೋಗದಿಂದ ಹಾಗೂ ವಿಶೇಷ ನೇಮಕಾತಿಯಡಿಯಲ್ಲಿ ಪ್ರಕಟಿಸಿದ ಅಧಿಸೂಚನೆಯ ಆಧಾರದ ಮೇಲೆ ನೇರ ನೇಮಕಾತಿಯಿಂದ ಬಂದ ಅಭ್ಯರ್ಥಿಗಳನ್ನು ನೇರ ನೇಮಕಾತಿ ಹುದ್ದೆಗಳಲ್ಲಿ ಹಾಗೂ ಪದೋನ್ನತಿ ಹುದ್ದೆಗಳಿಗೆ ಹಿಂದಿನ ಹುದ್ದೆಯಾದ ವಾಣಿಜ್ಯ ತೆರಿಗೆ ಪರಿವೀಕ್ಷಕರ ಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತೆಯನ್ನು ಆಧರಿಸಿ ಪದೋನ್ನತಿ ಹೊಂದಿದ ಅಧಿಕಾರಿಗಳನ್ನು ತುಂಬಿದ ಜೇಷ್ಠತಾ ಪಟ್ಟಿಯನ್ನು ತಯಾರಿಸಿ, ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:03–05–2010 ರಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಿ ಸದರಿ ಜೇಷ್ಠತೆ.

ಮತ್ತು ಅದಕ್ಕೆ ಸಂಬಂಧಿಸಿದಂತೆ ಇತರೇ ಸೇವಾ ವಿಷಯಗಳ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಬಾಧಿತರಾದ ಅಧಿಕಾರಿಗಳು/ನೌಕರರು ಆಕ್ಷೇಪಣೆಗಳನ್ನು ಲಿಖಿತ ಮೂಲಕ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ 30 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಈ ರೀತಿ ನಿಗಧಿತ ದಿನಾಂಕದೊಳಗೆ ಸ್ವೀಕರಿಸಿದ 37 ಆಕ್ಷೇಪಣೆಗಳನ್ನು ಪರಿಶೀಲಿಸಲಾಯಿತು. ಅದರಲ್ಲಿ ಶ್ರೀ. ಹೆಚ್.ಎನ್. ಶ್ರೀಕಂಠಮೂರ್ತಿ, ವಿ.ಎಸ್. ಕೊಣ್ಣೂರ್, ಹೆಚ್.ಎಸ್. ಗುರುನಾಥ, ಆರ್. ನಾಗರಾಜ್, ವೆಂಕಟರತ್ನಂ, ಕೃಷ್ಣ ಮತ್ತು ಮಹಮದ್ ಶಬ್ಬೀರ್ ಇವರ ಆಕ್ಷೇಪಣೆಗಳನ್ನು ಪರಿಶೀಲಿಸಿ ಸೂಕ್ತ ತಿದ್ದುಪಡಿ ಮಾಡಿದೆ.

ಶ್ರೀ. ಟಿ.ಜಿ. ರಮೇಶ್ ಪ್ರಸಾದ್, ಹೆಚ್.ಬಿ. ತಿಮ್ಮಯ್ಯ, ಜೆ. ಕುಚೇಲ, ಎಸ್. ಹೇಮಾಜಿನಾಯಕ್, ಎಸ್.ವಿ. ಕೃಷ್ಣಮೂರ್ತಿ, ಎಸ್. ಪ್ರತಾಪ್ ಕುಮಾರ್, ಎಂ. ನಾಗೇಂದ್ರ, ಕೆ. ಮಂಜುನಾಥ, ಎಂ.ಸಿ. ಮಹದೇವ್, ರಾಮನಹಳ್ಳಿ ವೀರಣ್ಣ, ಹೆಚ್.ಕೆ. ಪರಮೇಶ್ವರಪ್ಪ, ಟಿ. ಗೋವಿಂದಯ್ಯ, ಚನ್ನಬಸವರಾಜು, ಜಿ. ವಿಶ್ವನಾಥ್, ಡಿ. ವೆಂಕಟಪ್ಪ, ಮೋಹನ್ ಮಾನ್ಯ, ವಿ.ಎಂ. ಚಂದ್ರಶೇಖರ್, ಇ.ಎಸ್. ವಿಜೇಂದ್ರ, ಬಿ.ಎನ್. ಗೋಪಾಲ್, ಎಸ್.ಜೆ. ಹರೀಶ್ ಕುಮಾರ್ ಮಲ್ಹೋತ್ರ, ಎಂ. ಚಂದ್ರಪ್ಪ, ವಸಂತ ಬಿ. ದಂಡಿಗೆ, ಡಿ.ಎಸ್. ಲಿಂಗರಾಜು, ಎಸ್.ಪ್ರತಾಪ್ ಕುಮಾರ್, ಕೆ.ಮಂಜುನಾಥ, ಎಸ್. ರಾಜಶೇಖರ್, ಎಂ.ಎಸ್. ಸತ್ಯ ಪ್ರಕಾಶ್, ಕೆ.ಸಿ. ಮಲ್ಲಾನಾಯಕ್, ವಿ.ವಿ. ಹೊದಲೂರ, ಆರ್.ಸಿ. ಯಡವಣ್ಣನವರ್, ವಿ.ಕೆ. ಮರಡಣ್ಣನವರ್, ರವೀಂದ್ರನಾಥ ಪ್ರಭು, ಎಸ್. ಲಕ್ಷ್ಮೀಪತಯ್ಯ, ಜಿ.ಆರ್. ಮಂಜೇಶ್, ಆರ್.ಇ. ಪ್ರಮೀಳಾ, ಬಿ.ಆರ್. ಸುರೇಶ್ ಬಾಬು, ನಾರಾಯಣಪ್ಪ, ವಿ.ಬಿ. ಗಿರಡ್ಡಿ, ಆರ್. ಜಗದೀಶ್, ಬಿ. ಕಂಪ್ಲೇಶ್, ಟಿ. ರಾಜು, ಎ.ಕೆ. ಚಿಟಗುಪ್ಪಿ ಎಸ್. ಪ್ರತಾಪ್ ಕುಮಾರ್ ಇವರುಗಳು ಶ್ರೀ. ಜಿ.ಟಿ. ರಾಮಸ್ವಾಮಿ ಇವರ ಪ್ರಕರಣವನ್ನು ಉದಾಹರಿಸಿ ಈಗಾಗಲೇ ಅಂತಿಮವಾಗಿ ಪ್ರಕಟಿಸಿದ ಜ್ಯೇಷ್ಠತಾ ಪಟ್ಟಿಯನ್ನು ಯಾವುದೇ ಹಂತದಲ್ಲಿಯೂ ಮಾರ್ಪಡಿಸಬಾರದೆಂಬ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಈ ಆಕ್ಷೇಪಣೆಗೆ ಸಂಬಂಧಿಸಿದಂತೆ ಕರ್ನಾಟಕ ಉಚ್ಚ ನ್ಯಾಯಾಲಯ ನೀಡಿದ ತೀರ್ಪನ್ನು ಕೆಳಕಂಡಂತೆ ಪರಿಶೀಲಿಸಿದೆ.

ಮೇ: ಜಿ.ಟಿ. ರಾಮಸ್ವಾಮಿ ಪ್ರಕರಣದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ತನ್ನ ತೀರ್ಪಿನಲ್ಲಿ

> *"We declare that the seniority list published by the Government in the cadre of ACTOs as on 01-07-1976 in O.M. No. FD 94 CSE 75(1) dated 13-12-1976 had become final and that in the preparation of further seniority lists in the cadre, Government should only proceed on the rankings assigned in that list except when a modification is called for in compliance of an order to be made by the Supreme Court or this Court in any other case"*

ಎಂದು ಸ್ಪಷ್ಟೀಕರಿಸಿದೆ. ಈಗಾಗಲೇ ಅಧಿಸೂಚನೆ ಸಂಖ್ಯೆ ಆಇ 220 ವಾತೆಸಿ 94 ದಿನಾಂಕ:04–05–1996 ರಲ್ಲಿ ಪ್ರಕಟಿಸಿದ ಅಂತಿಮ ಪಟ್ಟಿಯನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿಲ್ಲ. ಅದಲ್ಲದೇ ಪೂರಕ ವೃಂದವಾದ ವಾಣಿಜ್ಯ ತೆರಿಗೆ

ಪರಿವೀಕ್ಷಕರ ಜ್ಯೇಷ್ಠತಾ ಪಟ್ಟಿಯನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ 2205/2000 (Sudharshan v/s. State)ರಲ್ಲಿ ದಿನಾಂಕ:22-03-2005ರ ಆದೇಶದಲ್ಲಿ Non-est ಎಂದು ಘೋಷಿಸಿತ್ತು. ಆದ್ದರಿಂದ ಅದನ್ನು ಹೊಸದಾಗಿ ತಯಾರಿಸಿ ದಿನಾಂಕ:10-09-2009ರಂದು ಪ್ರಕಟಿಸಲಾಗಿತ್ತು. ಆದರೆ ಕರ್ನಾಟಕ ಉಚ್ಚ ನ್ಯಾಯಾಲಯವು ಮೆ: ಜಿ.ಟಿ. ರಾಮಸ್ವಾಮಿ ಇವರ ಪ್ರಕರಣದಲ್ಲಿ "ಈಗಾಗಲೇ ಒಂದು ಬಾರಿ ಅಂತಿಮವೆಂದು ಪ್ರಕಟಿಸಿದ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಯಾವುದೇ ಕಾರಣಕ್ಕೂ ಸಹ ನ್ಯಾಯಾಲಯದ ಸ್ಪಷ್ಟ ನಿರ್ದೇಶನವಿಲ್ಲದೇ ಬದಲಿಸಬಾರದೆಂಬ ಸ್ಪಷ್ಟ ನಿರ್ದೇಶನದ ಹಿನ್ನೆಲೆಯಲ್ಲಿ ದಿನಾಂಕ:04-05-1996ರಲ್ಲಿ ಪ್ರಕಟಿಸಿದ ಜ್ಯೇಷ್ಠತಾ ಪಟ್ಟಿಯನ್ನು ಯಥಾವತ್ತಾಗಿ ಕಾಯ್ದಿರಿಸಲು ನಿರ್ಧರಿಸಲಾಗಿದೆ.

2006ರಲ್ಲಿ ನೇರ ನೇಮಕಾತಿಯಾದ 31 ಅಧಿಕಾರಿಗಳು, 2002ರಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಮಾಡಿದ ತಿದ್ದುಪಡಿಯ ಬಗ್ಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ್ದು, ಸರ್ಕಾರಕ್ಕೆ ಯಾವುದೇ ವೃಂದ ಮತ್ತು ನಿಯಮಗಳಿಗೆ ತಿದ್ದುಪಡಿ ಮಾಡಲು ಅಧಿಕಾರವಿದ್ದು, ತಿದ್ದುಪಡಿಯ ಆಧಾರದ ಮೇಲೆ ಈಗಾಗಲೇ ದಿನಾಂಕ:29-04-2004ರಂದು 273 ವಾಣಿಜ್ಯ ತೆರಿಗೆ ಪರಿವೀಕ್ಷಕರನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳಾಗಿ ಸ್ಥಾನಪನ್ನ ಮುಂಬಡ್ತಿ ನೀಡಿದೆ. ಈ ಮುಂಬಡ್ತಿ ಆದೇಶವನ್ನು ಈವರೆವಿಗೂ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿರುವುದಿಲ್ಲ. ಅದಲ್ಲದೇ 2006ರ ನೇರ ನೇಮಕಾತಿ ಅಭ್ಯರ್ಥಿಗಳು ಇಲಾಖೆಗೆ ಹಾಜರಾಗುವ ಮುಂಚೆಯೇ ಎಲ್ಲಾ ಕ್ರಮಗಳು ಪೂರ್ಣಗೊಂಡಿರುತ್ತದೆ. 2006ರ ನೇರ ನೇಮಕಾತಿ ಅಭ್ಯರ್ಥಿಗಳು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 114,127,150, 571,585/2010ರಲ್ಲಿ ಅರ್ಜಿ ಸಲ್ಲಿಸಿ 2002ರ ತಿದ್ದುಪಡಿಯ ಬಗ್ಗೆ ಪ್ರಶ್ನಿಸಿದ್ದು, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ ತನ್ನ ತೀರ್ಪಿನಲ್ಲಿ ದಿನಾಂಕ 19-02-2010ರಲ್ಲಿ ಕೆಳಕಂಡಂತೆ ಆದೇಶಿಸಿದೆ.

> Reiteration of the aforesaid views in this case shall not be construed as expression of our opinion on the aspect of de-freezing of direct recruitment vacancies in this case. Incidentally, it may be mentioned that in the aforesaid case the Applicants had no locus standi to question the freezing of direct recruitment vacancies, as the Applicants therein had entered service subsequent to the freezing of direct recruitment vacancies

ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ: 19.02.2010 ರ ಮೇಲ್ಕಂಡ ಆದೇಶವನ್ನು 2006 ರಲ್ಲಿ ನೇರ ನೇಮಕಾತಿ ಹೊಂದಿದ ಅಧಿಕಾರಿಗಳು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:79942/2010 ರಲ್ಲಿ ಪ್ರಶ್ನಿಸಿದ್ದು, ಪ್ರಕರಣ ಬಾಕಿ ಇದೆ. ಈ ಸಂಬಂಧದಲ್ಲಿ ಉಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿಗೊಳಪಟ್ಟಿರುತ್ತದೆ.

ಅದಲ್ಲದೇ ಸರ್ವೋಚ್ಚ ನ್ಯಾಯಾಲಯವು ಕೆಲವೊಂದು ಪ್ರಕರಣಗಳಲ್ಲಿ ನೇರ ನೇಮಕಾತಿ ಅಭ್ಯರ್ಥಿಗಳು ಸರ್ಕಾರಿ ಸೇವೆಗೆ ಹಾಜರಾದ ದಿನಾಂಕವನ್ನು ಜ್ಯೇಷ್ಠತೆಗೆ ಆಧಾರಿಸಬೇಕೇ ಹೊರತು ರಿಕ್ತಸ್ಥಾನ ಉಂಟಾದ ದಿನಾಂಕದಿಂದಲ್ಲ ಎಂದು ತೀರ್ಪು ನೀಡಿದ್ದು ಅದನ್ನು ಆಧಾರಿಸಿ ನೇರ ನೇಮಕಾತಿ ಅಭ್ಯರ್ಥಿಗಳು ಸರ್ಕಾರಿ ಸೇವೆಗೆ ಹಾಜರಾದ ದಿನಾಂಕದಿಂದ ಜ್ಯೇಷ್ಠತೆ ನೀಡಿದೆ.

ಮುಂದುವರೆದಂತೆ 2006ರಲ್ಲಿ ನೇರ ನೇಮಕಾತಿಯಾದ 1998 ಮತ್ತು 1999ನೇ ಬ್ಯಾಚಿನ ಅಧಿಕಾರಿಗಳಿಗೆ ಆದೇಶ ನೀಡುವಾಗ 1999ನೇ ಬ್ಯಾಚಿನ ಅಧಿಕಾರಿಗಳಿಗೆ 1998ನೇ ಬ್ಯಾಚಿನ ಅಧಿಕಾರಿಗಳಿಗಿಂತ ಮೊದಲು ನೇಮಕಾತಿ ಆದೇಶ ನೀಡಿದ್ದು, ಆದೇಶ ನೀಡುವಾಗ ಲಿಖಿತ ಷರತ್ತು ಪತ್ರವನ್ನು ಪಡೆಯಲಾಗಿತ್ತು. ಈ ಸಂಬಂಧ ರೆವಿನ್ಯೂ ಇಲಾಖೆಯ ಅಧಿಕಾರಿಗಳು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿ, ಇಲ್ಲಿ ದಾವೆ ಹೂಡಿದ್ದು, ಸದರಿ ಆದೇಶದ ಮೇಲೆ, ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ, ಸರ್ಕಾರ ದಾವೆ ಹೂಡಿದ್ದು, ಅರ್ಜಿ ಸಂಖ್ಯೆ 10605-10620/2010ರ (S-KAT) ಆದೇಶದ ಮೇಲೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ದಿನಾಂಕ 06-04-2010ರಂದು ಕೆಳಕಂಡಂತೆ ಮಧ್ಯಂತರ ಆದೇಶ ನೀಡಿದೆ.

> In the light of the fact that the Government has not yet started the process of preparing any seniority list, we are of the opinion even if the Government initiates the process of preparing the seniority list, the same shall be subject to the result of the present writ petition.
>
> Further, the seniority list so prepared shall not be published and shall not be finalized and given effect to pending disposal of the writ petition. It is further directed so far as promotions either from 1998 notification or from 1999 notification, status-quo shall be maintained.

ಮೇಲ್ಕಂಡ ಮಧ್ಯಂತರ ಆದೇಶವೂ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ನೇಮಕಾತಿಯಾದ ಅಧಿಕಾರಿಗಳಿಗೂ ಅನ್ವಯವಾಗುವುದರಿಂದ 2006ರ ನೇರ ನೇಮಕಾತಿ ಅಭ್ಯರ್ಥಿಗಳಾದ 1998 ಮತ್ತು 1999ನೇ ಬ್ಯಾಚ್ ಹಾಗೂ ಮುಂದುವರಿದ ಬ್ಯಾಚ್‌ಗಳ ಜ್ಯೇಷ್ಠತೆಯನ್ನು ಪ್ರಕಟಪಡಿಸುವುದನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಮಧ್ಯಂತರ ಆದೇಶದನ್ವಯ ತಡೆಹಿಡಿಯಲಾಗಿದೆ. ಈ ಸಂಬಂಧದಲ್ಲಿ ಉಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿಗೊಳಪಟ್ಟಿರುತ್ತದೆ.

ಶ್ರೀ ಆರ್. ನಾಗರಾಜ್ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದೆ. ಪದೋನ್ನತಿ ಆದೇಶ ಈವರೆವಿಗೂ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿರುವುದಿಲ್ಲ. ಸ್ಥಾನಪನ್ನ ಮುಂಬಡ್ತಿ ನೀಡಿದ ಅರ್ಹತಾ ದಿನಾಂಕವನ್ನು ಬದಲಾವಣೆ ಮಾಡಿರುವುದಿಲ್ಲ.

ಸರ್ಕಾರ ಸ್ಥಾನಪನ್ನ ಮುಂಬಡ್ತಿ ನೀಡುವಾಗ ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದಕ್ಕೆ ಅರ್ಹತಾ ದಿನಾಂಕವನ್ನು ನೀಡಿದ್ದು, ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಿಲ್ಲವಾದ್ದರಿಂದ, ಸದರಿ ಆದೇಶದಲ್ಲಿ ನೀಡಿದ ಅರ್ಹತಾ ದಿನಾಂಕವನ್ನೇ ಆಧಾರಿಸಿ ಅದರೊಳಗೆ ಹಿಂದಿನ ಹುದ್ದೆಯ Inter-se ಸೀನಿಯಾರಿಟಿಯನ್ನು ಆಧಾರಿಸಿ ಜ್ಯೇಷ್ಠತೆಯನ್ನು ನೀಡಲಾಗಿದೆ.

ಶ್ರೀ ನಾರಾಯಣಪ್ಪ ಇವರ ಆಕ್ಷೇಪಣೆಯಂತೆ ಹುದ್ದೆಗಳ ಮಾಹಿತಿಯನ್ನು ಪ್ರಕಟಿಸಲಾಗಿದೆ.

ಶ್ರೀ ಹಬೀಬುಲ್ಲಾ ಬೇಗ್, ನಾಗರಾಜು, ಗಂಗಾಧರಯ್ಯ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಸಿ.ಆ.ಸು.ಇಲಾಖೆಯ ಸುತ್ತೋಲೆಯಂತೆ ಇಲಾಖಾ ಪರೀಕ್ಷೆಯನ್ನು ಫಲಿತಾಂಶ ಪ್ರಕಟವಾದ ದಿನಾಂಕವನ್ನೇ ಆಧಾರಿಸಿದೆ.

ಶ್ರೀ ಈಶ್ವರಪ್ಪ ಜಿ. ನೆಲಗೋಳ್, ವಿ.ಜಿ. ತಿಮ್ಮಯ್ಯ, ಕೆ.ಎಂ. ನಾಗರಾಜ್, ಆರ್.ಎನ್. ಲೇಪಾಕ್ಷಯ್ಯ, ಜೆ.ಎನ್. ಅನಂತ, ಡಿ. ಶಿವಣ್ಣ, ಸಿ.ಎಂ. ಲಲಿತ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಇದು ಪದೋನ್ನತಿಯನ್ನು ಪುನರ್‌ವಿರ್ಮಶಿಸ ಬೇಕಾದ ಹಿನ್ನಲೆಯಲ್ಲಿ ಆಯುಕ್ತರಿಗೆ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಶ್ರೀ ತೀರ್ಥೇಗೌಡ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ನೇರ ನೇಮಕಾತಿ ಖೋಟಾದಡಿಯಲ್ಲಿ ನೇಮಕವಾಗಿದ್ದರೂ ಸಹ ಕರ್ತವ್ಯಕ್ಕೆ ಹಾಜರಾಗದಿರುವ ಕಾರಣ ನೇರನೇಮಕಾತಿಯಡಿಯಲ್ಲಿ ಪರಿಗಣಿಸಲು ಸಾಧ್ಯವಾಗುವುದಿಲ್ಲ.

ಶ್ರೀ ವಿ.ಬಿ. ಮಹೇಶ್ವರಪ್ಪ, ಡಿ.ಎ. ನರಸಿಂಹೇಗೌಡ, ಟಿ. ಮಹಾಲಿಂಗಪ್ಪ, ಎಸ್. ವೆಂಕಟರತ್ನಶೆಟ್ಟಿ, ಕೆ. ಭೈರಲಿಂಗೇಗೌಡ, ನಾರಾಯಣಗೌಡ, ವಿ.ಎಂ. ನಂಜೇಗೌಡ, ಎಂ.ಶಿವರಾಮಯ್ಯ, ಹೆಚ್. ರಮಾಕಾಂತನಾಯಕ್, ಗೋಪಾಲ್ ಇವರ ಆಕ್ಷೇಪಣೆಯನ್ನು ಪರಿಶೀಲಿಸಿದ್ದು, ಇವರು ವಾಣಿಜ್ಯ ತೆರಿಗೆ ಅಧಿಕಾರಿಗಳಾಗಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಇವರಿಗೆ ಪದೋನ್ನತಿ ನೀಡಿದ ನಂತರವೇ ನಿಯಮಗಳಡಿ ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದಲ್ಲಿ, ಜ್ಯೇಷ್ಠತೆಯನ್ನು ನಿರ್ಧರಿಸಲಾಗುತ್ತದೆ.

ಮೇಲ್ಕಂಡ ಎಲ್ಲಾ ಆಕ್ಷೇಪಣೆಗಳನ್ನು ಪರಿಶೀಲಿಸಿ ಈಗಾಗಲೇ ದಿನಾಂಕ:16–01–1993ರ ಅಂತ್ಯದವರೆಗೆ ಪ್ರಕಟಿಸಿದ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಯಥಾವತ್ತಾಗಿ ಮುಂದುವರೆಸಿ, ನಂತರದ ಮುಂದುವರಿದ ಅವಧಿಗೆ ಅಂದರೆ ದಿನಾಂಕ:17–01–1993ರ ನಂತರದ ಅವಧಿಗೆ ವಾಣಿಜ್ಯ ತೆರಿಗೆ ಅಧಿಕಾರಿಗಳ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ.

ಈ ಜ್ಯೇಷ್ಠತಾ ಪಟ್ಟಿಯು ಕೆಳಗಿನ ವೃಂದಗಳ ಜೇಷ್ಠತಾ ಪಟ್ಟಿಯಲ್ಲಿ ಆಗುವ ಬದಲಾವಣೆಗಳು ಮತ್ತು ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ರಾಜ್ಯ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡಬಹುದಾದ ತೀರ್ಪಿನ ಮೇರೆಗೆ ಮಾಡಬಹುದಾದ ಬದಲಾವಣೆಗಳಿಗೊಳಪಟ್ಟಿರುತ್ತದೆ.

ಈ ಆದೇಶದ ಅನುಬಂಧ–1 ರಲ್ಲಿ ಬ್ಲ್ಯಾಕ್ ಅವಧಿಯನ್ನು, ಅನುಬಂಧ–2 ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿಂಗಡಣೆಯನ್ನು, ಅನುಬಂಧ–3 ರಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿ ವೃಂದದ ದಿನಾಂಕ:17–01–1993 ರಿಂದ 31.12.2009 ರವರೆಗಿನ ಮುಂದುವರೆದ ಭಾಗಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಹಾಗೂ ಅನುಬಂಧ–4, 4ಎ, 4ಬಿ ಮತ್ತು 4ಸಿ ಯಲ್ಲಿ ಉದ್ಭವಿಸಿದ ರಿಕ್ತ ಸ್ಥಾನಗಳ ವಿವರಗಳನ್ನು ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್.ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾ.ತೆ–2).

ಸರ್ಕಾರದ ಅಧಿಸೂಚನೆ ಸಂ: ಆಇ 117 ವಾತೆಸಿ 2010, ದಿನಾಂಕ:26–08–2010ಕ್ಕೆ ಅನುಬಂಧ–1.

**VACANCY CHART SHOWING THE VACANCY ACCRUED AND UTILISED AGAINST DR & PR QUOTA IN THE CADRE OF COMMERCIAL TAX OFFICER FOR THE PERIOD FROM 17.01.1993 TO 31.12.2009**

| **Sl. No.** | | **Cadre Strength** | **DR/PR Ratio** | **Apportionment** | | **Actual Strength Increase/Decrease** | | | **Vacancy** | | **Remarks** |
|---|---|---|---|---|---|---|---|---|---|---|---|
| | | | | **DR** | **PR** | **Reason** | **DR** | **PR** | **DR** | **PR** | |
| [1] | [2] | [3] | [4] | [5] | [6] | [7] | [8] | [9] | [10] | [11] | [12] |
| **XXIV.** | **Block Period 17-1-93 to 28-6-93** | | | | | | | | | | |
| 24 | Opening Figures | 521 | 50 : 50 | 260 | 261 | | 135 | 148 | 125 | 113 | |
| | Posts released | | | | | Resg./Retd./ Death/ Prom. | 5 | 19 | | | |
| | Net | | | | | | 130 | 129 | 130 | 132 | |
| | No.of Posts Created | | | | | | | | 130 | 132 | |
| | Posts filled | | | | | Recruited Promoted | 1 | 104 | | | |
| | Closing Figures | 521 | | 260 | 261 | | 131 | 233 | 129 | 28 | |
| **XXV.** | **Block Period 29-6-93 to 21-2-97** | | | | | | | | | | |
| 25 | Opening Figures | 521 | 50 : 50 | 260 | 261 | | 131 | 233 | 129 | 28 | |
| | Posts released | | | | | Resg./Retd./ Death/ Prom. | 10 | 80 | | | |
| | Net | | | | | | 121 | 153 | 139 | 108 | |

| Sl. No. | | Cadre Strength | DR/PR Ratio | Apportionment | | Actual Strength Increase/Decrease | | | Vacancy | | Remarks |
|---|---|---|---|---|---|---|---|---|---|---|---|
| | | | | DR | PR | Reason | DR | PR | DR | PR | |
| | No.of Posts Created Nil Abolition - 20 | -20 | | -10 | -10 | | | | 129 | 98 | |
| | Posts filled | | | | | Recruited<br>Promoted | 58 | 18 | | | |
| | Closing Figures | 501 | | 250 | 251 | | 179 | 171 | 71 | 80 | |
| **XXVI.** | **Block Period 22-2-97 to13-10-97** | | | | | | | | | | |
| 26 | Opening Figures | 501 | 50 : 50 | 250 | 251 | | 179 | 171 | 71 | 80 | |
| | Posts released | | | | | Resg./Retd./ Death/ Prom. | 18 | 9 | | | |
| | Net | | | | | | 161 | 162 | 89 | 89 | |
| | No.of Posts Created Less Abolition | | | | | | | | 89 | 89 | |
| | Posts filled | | | | | Recruited<br>Promoted | Nil | 269 | | | |
| | Closing Figures | 501 | | 250 | 251 | | 161 | 431 | 89 | -180 | |
| **XXVII-** | **Block Period 14-10-1997 to 28-04-2006** | | | | | | | | | | |
| 28 | Opening Figures | 501 | 50 : 50 | 250 | 251 | | 161 | 431 | 89 | -180 | |
| | Posts released | | | | | Resg./Retd./ Death/ Prom. | 72 | 244 | | | |

| Sl. No. | | Cadre Strength | DR/PR Ratio | Apportionment | | Actual Strength Increase/Decrease | | | Vacancy | | Remarks |
|---|---|---|---|---|---|---|---|---|---|---|---|
| | | | | DR | PR | Reason | DR | PR | DR | PR | |
| | Net | | | | | | 89 | 187 | 161 | 64 | |
| | No.of Posts Created 35<br>Less Abolition 14 | 21 | | 11 | 10 | | | | 172 | 74 | |
| | Posts filled | | | | | Recruited<br>Promoted | 32<br>13 | 96 | | | |
| | Closing Figures | 522 | | 261 | 261 | | 134 | 283 | 127 | -22 | |
| **XXVIII. Block Period 29-04-2006 to** | | | | | | | | | | | |
| 29 | Opening Figures | 522 | 50 : 50 | 261 | 261 | | 134 | 283 | 127 | -22 | |
| | Posts released | | | | | Resg./Retd./ Death/ Prom. | 9 | 59 | | | |
| | Net | | | | | | 125 | 224 | 136 | 37 | |
| | No.of Posts Created | | | | | | | | 136 | 37 | |
| | Posts filled | | | | | Recruited<br>Promoted | 13<br>12 | - | | | |
| | Closing Figures | 522 | | 261 | 261 | | 150 | 224 | 111 | 37 | |

ಎಂ.ಆರ್.ಚಂದ್ರಶೇಖರಾರಾಧ್ಯ
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾ.ತೆ–2).

**ಸರ್ಕಾರದ ಅಧಿಸೂಚನೆ ಸಂ: ಆಇ 117 ವಾತೆಸಿ 2010, ದಿನಾಂಕ 26–08–2010ಕ್ಕೆ ಅನುಬಂಧ–2.**

**Allocation of SC & ST on Promotions in the Cadre of Commercial Tax Officers.**

**From 17-01-1993 to 31-12-2009.**

| BLOCK NO. | Eligibility dates for promotion | No.of Promotions | Cycle No. | Points Operated | Allocation of | | Filled | | Carry forward | |
|---|---|---|---|---|---|---|---|---|---|---|
| | | | | | SC | ST | SC | ST | SC | ST |
| BLOCK NO. XXIV<br>17-01-1993 to 28-06-1993 | | 104 | 11 | 21 to 33 | 2 | - | | | | |
| | | | 12 | 1 to 33 | 5 | 1 | | | | |
| | | | 13 | 1 to 33 | 5 | 1 | | | | |
| | | | 14 | 1 to 25 | 4 | 1 | | | | |
| | **Total** | | | | **16** | **3** | **15** | **2** | **(-2)** | **-** |
| BLOCK NO. XXV<br>29-06-1993 to 21-02-1997 | | 18 | 14 | 26 to 33 | 1 | - | | | | |
| | | | 15 | 1 to 10 | 2 | 1 | | | | |
| | **Total** | | | | **3** | **1** | **-** | **-** | **(-5)** | **(-1)** |
| BLOCK NO. XXVI<br>22-02-1997 to 13-10-1997 | | 269 | 15 | 11 to 33 | 3 | - | | | | |
| | | | 16 | 1 to 33 | 5 | 1 | | | | |
| | | | 17 | 1 to 33 | 5 | 1 | | | | |
| | | | 18 | 1 to 33 | 5 | 1 | | | | |
| | | | 19 | 1 to 33 | 5 | 1 | | | | |
| | | | 20 | 1 to 33 | 5 | 1 | | | | |
| | | | 21 | 1 to 33 | 5 | 1 | | | | |

